# ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ
## (ಹೊಸಪೇಟೆ ನಗರದ ಸ್ಲಂಗಳನ್ನು ಪರಿಗಣಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಾದರಪಡಿಸುತ್ತಿರುವ ಸಂಪ್ರಬಂಧ)


ಸಂಶೋಧನಾ ವಿದ್ಯಾರ್ಥಿನಿ

**ಈರಮ್ಮ ಬಿ.**

ಮಾರ್ಗದರ್ಶಕರು

**ಡಾ. ಎ.ಎಸ್. ಪ್ರಭಾಕರ**

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583276





**2015-2016**

# ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ

## (ಹೊಸಪೇಟೆ ನಗರದ ಸ್ಲಂಗಳನ್ನು ಪರಿಗಣಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ, ಸಾದರಪಡಿಸುತ್ತಿರುವ ಸಂಪ್ರಬಂಧ)



ಸಂಶೋಧನಾ ವಿದ್ಯಾರ್ಥಿನಿ

**ಈರಮ್ಮ ಬಿ.**

ಮಾರ್ಗದರ್ಶಕರು

**ಡಾ. ಎ.ಎಸ್. ಪ್ರಭಾಕರ**

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ



**ಬುಡಕಟ್ಟು ಅಧ್ಯಯನ ವಿಭಾಗ**

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583276

2015-2016

## ಮಾರ್ಗದರ್ಶಕರ ದೃಢೀಕರಣ ಪತ್ರ

ಈ ಮೂಲಕ ದೃಢೀಕರಿಸುವುದೇನೆಂದರೆ 2015-2016 ನೇ ಸಾಲಿನಲ್ಲಿ ಎಂ.ಫಿಲ್. ಪದವಿಗಾಗಿ **ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ (ಹೊಸಪೇಟೆ ನಗರದ ಸ್ಲಂ ಗಳನ್ನು ಪರಿಗಣಿಸಿ)** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಈರಮ್ಮ ಬಿ. ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಬುಡಕಟ್ಟು ಅಧ್ಯಯನ ವಿಭಾಗದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಸಂಪ್ರಬಂಧವನ್ನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

ಡಾ.ವಿ.ಎಸ್.ಪ್ರಭಾಕರ

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ -583276

# ಸಂಶೋಧಕರ ಪ್ರಮಾಣ ಪತ್ರ

ಈ ಮೂಲಕ ಪ್ರಮಾಣಕರಿಸುವುದೇನೆಂದರೆ 2015-2016 ನೇ ಸಾಲಿನಲ್ಲಿ ಎಂ.ಫಿಲ್. ಪದವಿಗಾಗಿ **ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ (ಹೊಸಪೇಟೆ ನಗರದ ಸ್ಲಂ ಗಳನ್ನು ಪರಿಗಣಿಸಿ)** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಬುಡಕಟ್ಟು ಅಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಎ.ಎಸ್. ಪ್ರಭಾಕರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಸಂಪ್ರಬಂಧವನ್ನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 09.08.2016

Eeramma B

**ಈರಮ್ಮ ಬಿ.**

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ -583276

# ಪರಿವಿಡಿ

# ಅಧ್ಯಾಯ – 01

## 1. ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ

1.1 ಪ್ರಸ್ತಾವನೆ

1.2 ಪದನಿಷ್ಪತ್ತಿ

1.3 ಅಧ್ಯಯನದ ಉದ್ದೇಶ

1.4 ಅಧ್ಯಯನದ ವ್ಯಾಪ್ತಿ

1.5 ಅಧ್ಯಯನದ ಪ್ರಾಕಲ್ಪನೆಗಳು ಅಥವಾ ಊಹೆಗಳು

1.6 ಅಧ್ಯಯನದ ವಿಧಾನಗಳು

1.7 ಅಧ್ಯಯನದ ಮಹತ್ವ

1.8 ಸಾಹಿತ್ಯ ಪರಾಮರ್ಶೆ ಅಥವಾ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

1.9 ಅಧ್ಯಯನದ ಸ್ವರೂಪ

## 1. ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ

### 1.1 ಪ್ರಸ್ತಾವನೆ

ಭಾರತದಲ್ಲಿ ಪ್ರತಿಯೊಂದು ನಗರಗಳಲ್ಲಿ ಕೊಳಗೇರಿ ಪ್ರದೇಶಗಳನ್ನು ಕಾಣುತ್ತೇವೆ. ಕೊಳಗೇರಿಗಳು ನಗರಗಳ ಅವಿಭಾಜ್ಯ ಅಂಗಗಳಂತೆ ಸೃಷ್ಟಿಯಾಗುತ್ತಾ ಬಂದಿವೆ. ಕೊಳಗೇರಿಗಳು ಆಯಾ ನಗರಗಳ ಅಸಮಾನ ಆರ್ಥಿಕ ವ್ಯವಸ್ಥೆಯ ಭಾಗವಾಗಿಯೂ ರೂಪಗೊಂಡಿರುವುದು ಕಂಡು ಬರುತ್ತಿದೆ. ತಾಲ್ಲೂಕು ಕೇಂದ್ರಗಳಿಂದ ಹಿಡಿದು, ಜಿಲ್ಲಾ ಕೇಂದ್ರಗಳವರೆಗೂ ಮತ್ತು ವೇಗವಾಗಿ ಬೆಳೆಯುತ್ತಿರುವ ಹಲವು ನಗರಗಳ ಅಂಚಿನಲ್ಲಿ ಈ ಕೊಳಗೇರಿಗಳು ಅಸ್ತಿತ್ವಕ್ಕೆ ಬಂದಿವೆ. ಕೊಳಗೇರಿಗಳು ಈ ದೇಶದ ಅನೈಸರ್ಗಿಕ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಉತ್ಪನ್ನಗಳೆಂದರೆ ಅತಿಶಯೋಕ್ತಿಯಲ್ಲ. ಕೈಗಾರೀಕರಣದ ನಂತರ ಛಿದ್ರವಾದ ಗ್ರಾಮಗಳ ಉತ್ಪಾದನಾ ಸಂಬಂಧಗಳು ಹಳ್ಳಿಗಳನ್ನು ತೊರೆಯಲಾರಂಭಿಸಿದವು.

ಕೃಷಿ ಸಂಬಂಧಿ ಚಟುವಟಿಕೆಗಳು ಮುರಿದುಬಿದ್ದು ಕೃಷಿಕರು ನೆಲೆತಪ್ಪಿದರು. ವ್ಯವಸಾಯಿ ಸಂರಚನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತಿದ್ದ ಕುಶಲಕರ್ಮಿಗಳ ಆರ್ಥಿಕತೆ ದಿಕ್ಕೆಟ್ಟು ಹೋಯಿತು. ರಾಷ್ಟ್ರೀಯ ಅರಣ್ಯ ಯೋಜನೆ, ವನ್ಯಜೀವಿ ಸಂರಕ್ಷಣೆ ಯೋಜನೆ, ಬೃಹತ್ ಯೋಜನೆಗಳ ಕಾರಣಗಳಿಗಾಗಿ ಅರಣ್ಯಗಳಿಂದ ಒಕ್ಕಲೆದ್ದ ಆದಿವಾಸಿಗಳು ಬಂದು ಸೇರಿದ್ದು ಈ ನಗರದಂಚಿನ ಕೊಳೆಗೇರಿಗಳಲ್ಲಿ. ಯಾವ ದೇಶದ ಆರ್ಥಿಕತೆ ಹಳ್ಳಿಗಳ ಕೃಷಿ ಉತ್ಪಾದನೆಯನ್ನು ಆಶ್ರಯಿಸಿತ್ತೊ ಅದೇ ದೇಶ ಬೃಹತ್ ಕೈಗಾರಿಕೆಗಳ ಉತ್ಪಾದನೆಯನ್ನು ಅವಲಂಬಿಸಿ ಗ್ರಾಮಗಳ ವ್ಯವಸಾಯಿ ಸಂರಚನೆಯನ್ನು ಇನ್ನಿಲ್ಲದಂತೆ ನಾಶ ಮಾಡಿತ್ತು. ಅರಣ್ಯಗಳ ಮತ್ತು ವನ್ಯಜೀವಿಗಳ ರಕ್ಷಣೆಯ ಹೆಸರಲ್ಲಿ ಮತ್ತು ಬೃಹತ್ ಯೋಜನೆಗಳ ನೆಪದಲ್ಲಿ ಅರಣ್ಯದಲ್ಲಿ ಶತಮಾನಗಳಿಂದ ನೆಲೆಸಿದ್ದ ಆದಿವಾಸಿ ಸಮುದಾಯಗಳನ್ನು ಹೀನಾಯವಾಗಿ ಒಕ್ಕಲೆಬ್ಬಿಸಿತು. ಅಂದರೆ ಶತಮಾನಗಳ ಕಾಲ ಈ ದೇಶದ ಸಾಮಾಜಿಕ ಆರ್ಥಿಕ ಅಸಮಾನತೆಯಿಂದ ನಲುಗಿ ಹೋಗಿದ್ದ ಸಮುದಾಯಗಳು ಸ್ವಾತಂತ್ರ್ಯನಂತರ ಮತ್ತೆ ಹೀನಾಯ ಸ್ಥಿತಿಗೆ ತಳ್ಳಲ್ಪಟ್ಟವು.

ಹೀಗೆ ಹೀನಾಯ ಸ್ಥಿತಿಗೆ ತಳ್ಳಲ್ಪಟ್ಟ ಸಮುದಾಯಗಳು ಬಂದು ನೆಲೆ ನಿಂತದ್ದು ಈ ಕೊಳೇಗೇರಿಗಳಲ್ಲಿ. ತಮ್ಮ ಉತ್ಪಾದನೆಯಿಂದ ದೇಶದ ಆರ್ಥಿಕತೆಯ ಸಮತೋಲನವನ್ನು ಕಾಪಾಡುತ್ತಿದ್ದ ಸಮುದಾಯಗಳ ಬದುಕೇ ನೆಲೆ ತಪ್ಪಿಹೋಯಿತು. ಇದಕ್ಕೆ ಕಾರಣ ಬಂಡವಾಳಶಾಹಿ ಉತ್ಪಾದನಾ ವಿಧಾನ ಮತ್ತು ಇನ್ನೂ ಹಳ್ಳಿಗಳಲ್ಲಿ ಜೀವಂತವಿರುವ ಊಳಿಗಮಾನ್ಯ ಆರ್ಥಿಕತೆಗಳು. ಈ ಎರಡೂ ಆರ್ಥಿಕ ಶಕ್ತಿಗಳು ಬಹುಸಂಖ್ಯಾತ ದುಡಿವ ವರ್ಗಗಳ ಅಸ್ತಿತ್ವಗಳನ್ನೇ ನಾಶ ಮಾಡಿವೆ. ಈ ಛಿದ್ರಗೊಂಡ ಸಮುದಾಯಗಳಿಗೆ ಅಸ್ತಿತ್ವ ಸಿಕ್ಕಿದ್ದು ನಗರಗಳ ಕೊಳೆಗೇರಿಗಳಲ್ಲಿ.

ಕೊಳಗೇರಿ ಪ್ರದೇಶದಲ್ಲಿ ಅತಿ ಹೆಚ್ಚಿನ ಜನಸಾಂದ್ರತೆ, ಅಥವಾ ಜನಸಂದಣಿಯು ಮಹಾನಗರಗಳ ಉಪಬೀದಿ ಮತ್ತು ಅಕ್ಕ ಪಕ್ಕ ಪ್ರದೇಶದಲ್ಲಿ ವಾಸಿಸುವ ಜನರ ಗುಣಲಕ್ಷಣಗಳು ಹಾಗೂ ಅವರ ಉನ್ನತ ಮಟ್ಟದ ಮನೆಗಳನ್ನು ಕಟ್ಟಿಕೊಳ್ಳಲಾಗದೆ ಚಿಕ್ಕ ಚಿಕ್ಕ ಜೋಪಡಿಗಳು ಹಾಕಿರುವ ದೃಶ್ಯ ಮತ್ತು ಕೊಳಕು ಬೀದಿಗಳು ವಿಧವಿಧವಾದ ಕೊಳಗೇರಿ ಪ್ರದೇಶಗಳಿವೆ. ಈ ಒಂದು ಪ್ರದೇಶಗಳ ಗಾತ್ರ ಮತ್ತು ಅದರ ಗುಣಲಕ್ಷಣಗಳು ಬೇರೆ ಬೇರೆ ಪ್ರದೇಶಗಳಿಗೆ ತಕ್ಕಂತೆ ಬೇರೆ ಬೇರೆ ರೀತಿಯಲ್ಲಿ ಇರುವುದನ್ನು ಕಾಣಬಹುದು. ಹಾಗೆಯೇ ಬಹುಮುಖ್ಯವಾದ ಸಾವಿರಾರು ಸಂಬಂಧವಿರುವ ಜನರು ಹಾಗೂ ಅವರ ನೈರ್ಮಲ್ಯೀಕರಣ ಪರಿಪಾಲನೆ, ಪರಿಶುದ್ಧ ನೀರಿನ ಸಾಗಾಣಿಕೆ, ಸಾರಾಗವಾಗಿ ವಿದ್ಯುತ್‌ಶಕ್ತಿ ಪೂರೈಕೆ ಅವುಗಳನ್ನು ಸರಿಯಾದ ಸಮಯಕ್ಕೆ ಪಡೆದುಕೊಳ್ಳಲಾಗಿದೆ. ಬಲವಂತವಾಗಿ ಒತ್ತಾಯಪೂರ್ವಕವಾಗಿ ಪಡೆಯುವ ಪ್ರಯತ್ನ ಮತ್ತು ಬೇರೆ ಬೇರೆ ಮೂಲಭೂತ ಸೌಕರ್ಯಗಳನ್ನು ಪಡೆದುಕೊಳ್ಳುವುದರಲ್ಲಿ ವಿಫಲತೆಯನ್ನು ಅನುಭವಿಸುತ್ತ ಬಂದಿದ್ದಾರೆ. ಇಂತಹ ಜನರು ನಗರ ಪ್ರದೇಶದ ತುಂಬಾ ಬಡತನದೊಂದಿಗೆ ಜನರು ವಾಸಿಸುವುದನ್ನು ಕಾಣಬಹುದು.

ಭಾರತೀಯ ಸಂಸ್ಕೃತಿಯ ಜೀವಂತ ಪಳೆಯುಳಿಕೆಗಳಾದ ಅನೇಕ ಬುಡಕಟ್ಟು ಸಮುದಾಯಗಳು ವಾಸಿಸುವುದು ಈ ಒಂದು ಕೊಳಗೇರಿಗಳಲ್ಲಿ. ಕೊಳಗೇರಿ ನಿವಾಸಿಗರ ಸಮಸ್ಯೆಗಳು ಭಿನ್ನವಾಗಿ ಕಂಡರೂ, ಅವರು ಅನುಭವಿಸುವ ಸ್ವರೂಪ ಒಂದೇ ಆಗಿರುತ್ತದೆ. ಪ್ರಾದೇಶಿಕ ವೈವಿಧ್ಯತೆಗೆ ಅನುಗುಣವಾಗಿ ಸಮಸ್ಯೆಗಳ ಸ್ವರೂಪ ಸೃಷ್ಟಿಯಾಗಿದ್ದರೂ ಅವು ತೀರಾ ಭಿನ್ನವಾಗಿವೆ. ಆದ್ದರಿಂದಲೇ ಭಾರತೀಯ ವೈವಿಧ್ಯಮಯ ಏಣಿ–ಶ್ರೇಣಿ ಪದ್ಧತಿಯ ವಿಷಮ ಸಮಾಜದಲ್ಲಿ ಅನೇಕ ಅಸಮಾನತೆಗಳಿವೆ.

ಸರ್ಕಾರವು ಕೊಳಗೇರಿ ಪ್ರದೇಶಗಳನ್ನು ಅಭಿವೃದ್ಧಿ ಪಡಿಸುವ ಮೂಲಕ ರಾಜ್ಯವನ್ನು ಕೊಳಗೇರಿ ಮುಕ್ತ ನಗರ / ಪಟ್ಟಣಗಳನ್ನಾಗಿ ಪರಿವರ್ತಿಸುವ ಗುರಿಯನ್ನು ಹೊಂದಿದೆ.

**ರಾಜೀವ್ ಅವಾಸ ಯೋಜನೆಯ ಪ್ರಕಾರ** : ಕೇಂದ್ರ ಸರ್ಕಾರವು ದೇಶವನ್ನು "ಕೊಳಗೇರಿ ಮುಕ್ತ ದೇಶವನ್ನಾಗಿ ಮಾಡಲು ಈ ಯೋಜನೆಯನ್ನು 2013 ರಿಂದ 2022 ರವರೆಗೆ ಜಾರಿಯಲ್ಲಿರುತ್ತದೆ. ಮೊದಲ ಹಂತದಲ್ಲಿ ರಾಜ್ಯದ 10 ಮಹಾನಗರ ಪಾಲಿಕೆಗಳು ಹಾಗೂ ರಾಜ್ಯದ ಇತರೆ 30 ನಗರ / ಪಟ್ಟಣಗಳನ್ನು ಮಾರ್ಗಸೂಚಿಯಂತೆ ಜಿಲ್ಲಾ ಕೇಂದ್ರಗಳು ಹಾಗೂ ರಾಜೀವ್ ಅವಾಸ ಯೋಜನೆಯ ಪರಿಷ್ಕೃತ ಮಾರ್ಗಸೂಚಿಯಂತೆ ಅತಿ ಹೆಚ್ಚು ಕೊಳಗೇರಿ ನಿವಾಸಿಗಳು ವಾಸವಿರುವ ನಗರಗಳು, ಜಿಲ್ಲಾ ಕೇಂದ್ರಗಳು, ಧಾರ್ಮಿಕ ಕೇಂದ್ರಗಳು, ಐತಿಹಾಸಿಕ ನಗರಗಳು, ಸಾಂಸ್ಕೃತಿ ಮತ್ತು ಪ್ರವಾಸಿ ಕೇಂದ್ರವಿರುವ ನಗರಗಳಲ್ಲಿ ಕೊಳಗೇರಿ ನಿವಾಸಿಗಳ ಮೂಲಭೂತ ಸೌಕರ್ಯಗಳ ವ್ಯವಸ್ಥೆ ಸರಿಯಾಗಿ ಇಲ್ಲದೆ ಇರುವುದು. ಈ ಒಂದು ಪ್ರದೇಶಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಅಲ್ಪಸಂಖ್ಯಾತರು ವಾಸವಾಗಿದ್ದಾರೆ.

ರಾಜ್ಯದ ನಗರಗಳ ಪ್ರದೇಶದಲ್ಲಿ ವಾಸಿಸುವ ಬಡಜನರ ಕೊಳಗೇರಿ ನಿವಾಸಿಗಳ ಜೀವನಮಟ್ಟವು ಅತಿ ಕೆಳಮಟ್ಟದಲ್ಲಿರುವುದನ್ನು ಅರಿತು ಕರ್ನಾಟಕ ಸರ್ಕಾರವು ದಿನಾಂಕ 1 ನೇ ನವೆಂಬರ್ 1974 ರಲ್ಲಿ ಕರ್ನಾಟಕ ಕೊಲಗೇರಿ ಪ್ರದೇಶಗಳ ಅಭಿವೃದ್ಧಿ ಮತ್ತು ನಿರ್ಮೂಲನೆ ಕಾಯಿದೆ 1973 ರಲ್ಲಿ ಜಾರಿಗೆ ತಂದಿದ್ದು. ಕರ್ನಾಟಕ ಕೊಳಗೇರಿ ನಿರ್ಮೂಲನ ಮಂಡಳಿಯನ್ನು 1975 ರ ಜುಲೈನಲ್ಲಿ ಸ್ಥಾಪಿಸಲಾಯಿತು. ನಗರ ಕೊಳಗೇರಿ ಪ್ರದೇಶಗಳಲ್ಲಿ ವಾಸಿಸುತ್ತಿರುವ ನಿವಾಸಿಗಳು ಜೀವಿಸಲು ಯೋಗ್ಯವಲ್ಲದ ವಾತಾವರಣವಿದ್ದು ಆರೋಗ್ಯ ಹಾಗೂ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದು ಅವರ ಜೀವನ ಮಟ್ಟವನ್ನು ಸುಧಾರಿಸಲು ಸರ್ಕಾರವು ಕೊಳಗೇರಿ ನಿವಾಸಿಗಳ ಅಭಿವೃದ್ಧಿಗಾಗಿ ಕರ್ನಾಟಕ ಕೊಳಗೇರಿ ನಿರ್ಮೂಲನ ಮಂಡಳಿಯನ್ನು ಸ್ಥಾಪಿಸಿದೆ.

ಈ ಒಂದು ಕೊಳಗೇರಿಗಲ್ಲಿ ವಾಸಿಸುವ ಜನರಲ್ಲಿ ಸಮುದಾಯಗಳಿಂದ ಸಮುದಾಯಗಳಿಗೆ ಭಿನ್ನವಾಗಿರುತ್ತವೆ. ಅವರ ಅಚಾರ-ವಿಚಾರ, ಮೂಢನಂಬಿಕೆ ಪದ್ಧತಿ, ಸಂಪ್ರದಾಯಗಳು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಅನುಸರಿಸುತ್ತ ಬಂದಿದ್ದಾರೆ. ಅವರ ಸಮುದಾಯದಲ್ಲಿ ಹುಟ್ಟಿನಿಂದ ಸಾಯುವವರೆಗಿನ ಸಂಸ್ಕಾರಗಳು ವಿಶಿಷ್ಟವಾಗಿರುವುದು ಕಂಡುಬರುತ್ತದೆ.

ನಗರೀಕರಣ, ಆಧುನೀಕರಣ, ವೈಜ್ಞಾನೀಕರಣವಾದ ಪ್ರಭಾವ ಪ್ರೇರಣೆಯಿಂದ ಕೊಳಗೇರಿ ನಿವಾಸಿಗರ ಮೇಲೆ ಆಗಾಧವಾದ ಪರಿಣಾಮ ಬೀರುತ್ತದೆ. ಅನೇಕ ಸಮಸ್ಯೆಗಳನ್ನು ಹುಟ್ಟು ಹಾಕುತ್ತಿದ್ದೆ ಕೆಲಸಾಂಪ್ರದಾಯಿಕ ಆಚರಣೆಗಳು ಕಡಿಮೆಯಾಗುತ್ತಿವೆ ಎಂಬುವುದನ್ನು ಗಮನಿಸಬಹುದು. ಈ ಅನ್ಯನತೆಗಳು ಸಾಂಪ್ರದಾಯಿಕ ಕುರುಹುಗಳಾಗಿದ್ದು ಇಂತಹ ಅನನ್ಯತೆಯನ್ನು ಆಧುನಿಕ ಶಿಸ್ತುಗಳಲ್ಲಿ ಅಧ್ಯಯನ ಮಾಡಬೇಕಾದ ಅಗತ್ಯವಿದೆ. ಈ ಕುರಿತಂತೆ ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯನಂತರದಲ್ಲಿ ಹಲವು ಸಂಶೋಧನೆಗಳು ನಡೆದಿದ್ದು. ಹೊಸ ಹೊಸ ವಿಚಾರಗಳು ಶೋಧನೆಗೊಂಡಿದೆ. ಇಲ್ಲಿ ವಾಸಿಸುವ ಕೊಳಗೇರಿ ಜನರನ್ನು ವಿಭಿನ್ನ ರೀತಿಯಲ್ಲಿ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನವಾಗಿದೆ.

ಕೊಳಗೇರಿಗಳಲ್ಲಿ ಹಲವಾರು ವೈಶಿಷ್ಟ್ಯತೆಗಳನ್ನು ಹೊಂದಿರುವ ಅನೇಕ ಸಮುದಾಯಗಳ ಜನರು ಇರುವುದರಿಂದ ತಮ್ಮದೇ ಆದ ಕೆಲವು ಸ್ವಂತಿಕೆಯ ಕಲೆಗಳು, ಆಚಾರ-ವಿಚಾರಗಳು, ಮೌಖಿಕ-ಸಾಹಿತ್ಯ, ಸಂಸ್ಕೃತಿಯನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ತಮ್ಮ ಮೂಲ ನೆಲೆ, ಸಂಸ್ಕೃತಿಯನ್ನು ಕಳೆದುಕೊಂಡು ಬಂದವರಾಗಿದ್ದರೂ ವಿಶಿಷ್ಟಮಯವಾದ ಸಂಸ್ಕೃತಿಯನ್ನು ಅಳವಡಿಸಿಕೊಂಡು ಉತ್ಕೃಷ್ಟವಾದ ಸಾಂಸ್ಕೃತಿಕ ಜೀವನವನ್ನು ರೂಪಿಸಿಕೊಂಡಿದ್ದಾರೆ. ಆಧುನಿಕತೆಯ ಪ್ರಭಾವದಿಂದಾಗಿ ಈ ಕೊಳಗೇರಿ ಪ್ರದೇಶದಲ್ಲಿ ಇಂದಿಗೂ ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ,

ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಸ್ಥಿತ್ಯಂತರಗಳಾಗುತ್ತಿವೆ. ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

## 1.2 ಪದನಿಷ್ಪತ್ತಿ

ಕೊಳಗೇರಿ ಎಂಬ ಪದವು ಅಂಗ್ಲ ಪದವಾದ **ಸ್ಲಂ (Slum),** ಎಂಬ ಪದದಿಂದ ಬಂದಿದೆ. **'ಸ್ಲಂ'** ಎಂದರೆ **'ಕೊಳಚೆ'** ಅಥವಾ **'ಕೊಳಗೇರಿ'** ಎಂದರ್ಥ. ಈ ಪದಕ್ಕೆ ಅನ್ವಯಿಸುವಂತಹ ಕೊಳಚೆ ಅಥವಾ ಕೊಳಗೇರಿ ಪ್ರದೇಶವೆಂದರೆ ಕೊಳಚೆ, ವಠಾರ ಪ್ರದೇಶ, ಬೀದಿಗಳು, ಚರಂಡಿ ರಸ್ತೆಗಳ ಬದಿಗಳು ಮುಂತಾದವುಗಳ ಮಹಾನಗರಗಳಲ್ಲಿನ ಮುಖ್ಯ ಬೀದಿಗಳನ್ನು ಬಿಟ್ಟು ಉಳಿದ ಕೊಳಚೆ ಪ್ರದೇಶಗಳಲ್ಲಿ ಅತಿ ಹೆಚ್ಚಿನ ಜನರು ವಾಸವಾಗಿರುವ ಪ್ರದೇಶವನ್ನು ಕೊಳಗೇರಿ ಎಂದು ಕರೆಯಲಾಗಿದೆ.

ಮನುಷ್ಯರು ವಾಸಿಸಲು ಯೋಗ್ಯವಲ್ಲದ ಕೊಳಚೆಯಿಂದ ಕೂಡಿದ್ದು ಕಲುಷಿತ ಆರೋಗ್ಯ ಮತ್ತು ನೈರ್ಮಲ್ಯ ಇಲ್ಲದೆ ಇರುವ ಪರಿಸರದಲ್ಲಿ ವಾಸಿಸುತ್ತಿರುವ ಜನರ ಒಂದು ಪ್ರದೇಶಕ್ಕೆ ಕೊಳಗೇರಿ ಎಂದು ಕರೆಯಲಾಗಿದೆ.

ಕೊಳಗೇರಿ ಜನರ ಬದುಕು ನಿರ್ಮಾಣವಾಗಿರುವುದೇ ಚರಂಡಿಗಳ ಸುತ್ತಮುತ್ತ ಎನ್ನಬಹುದು. ಈ ಪ್ರದೇಶಗಳು ಎಲ್ಲಾ ಕಾಲದಲ್ಲೂ ಕೊಳಕಾಗಿರುವುದು ಮತ್ತು ಆರೋಗ್ಯಕ್ಕೆ ಹಾನಿ ಉಂಟುಮಾಡುವುದು ಸಾಮಾನ್ಯವಾಗಿದೆ. ಚರಂಡಿಗಳ ರಿಪೇರಿ ಮತ್ತು ಸ್ವಚ್ಛತೆ ಕೆಲಸಗಳು ಇಲ್ಲಿ ಅರೆಬರೆ ವ್ಯವಸ್ಥೆಯಿಂದಲೇ ಇರುತ್ತದೆ. ಆದ್ದರಿಂದ ಈ ಒಂದು ಪ್ರದೇಶವನ್ನು ಕೊಳಗೇರಿ ಎಂದು ಕರೆಯಲಾಗಿದೆ.

ದೇಶದಲ್ಲಿ 1957 ರಲ್ಲಿ ಜರುಗಿದ ಕೊಳಗೇರಿ ಪ್ರದೇಶಗಳ ನಿರ್ಮೂಲನೆ ಸಮ್ಮೇಳನದಲ್ಲಿ ಈ ಕೆಳಗಿನಂತೆ ಕೊಳಗೇರಿ ಪ್ರದೇಶದ ಬಗ್ಗೆ ವಿವರಿಸಲಾಗಿದೆ.

**ಕೊಳಗೇರಿ ಪ್ರದೇಶಗಳೆಂದರೆ :** ಸಾಮಾನ್ಯವಾಗಿ ಜನಸಂಖ್ಯೆಯು ವಿಪರೀತವಾಗಿ ಬೆಳೆಯುತ್ತಿದ್ದು ನಿರುದ್ಯೋಗದ ಸಮಸ್ಯೆ ಉಂಟಾದಾಗ ಅವರು ಹಳ್ಳಿಗಳಿಂದ ನಗರ ಪ್ರದೇಶಕ್ಕೆ ಬಂದು ಎಲ್ಲಾ ನಿವಾಸಿಗಳು ಚರಂಡಿ ಪಕ್ಕದಲ್ಲಿ ಕಾರ್ಖಾನೆಗಳ ಪಕ್ಕದಲ್ಲಿ ತಮ್ಮ ಕಚ್ಚಾವಸ್ತುಗಳ ಮೂಲಕ ಗುಡಿಸಲುಗಳನ್ನು ನಿರ್ಮಿಸಿಕೊಂಡು ವಾಸಿಸುವ ಒಂದು ಸ್ಥಳಕ್ಕೆ ಕೊಳಗೇರಿ ಪ್ರದೇಶಗಳು ಎಂದು ಕರೆಯುತ್ತಾರೆ.

## 1.3 ಅಧ್ಯಯನದ ಉದ್ದೇಶ

ಈ ಪ್ರಭುತ್ವವು ಕೊಳಗೇರಿ ಪ್ರದೇಶಗಳ ನಿವಾಸಿಗರ ಮೇಲೆ ತನ್ನ ಪ್ರಭಾವವನ್ನು ಬೀರಿದೆ. ಸಾಮಾಜಿಕ ಸಂವಹನದಿಂದ ದೂರ ಉಳಿದಿರುವ ಕೊಳಗೇರಿ ನಿವಾಸಿಗರು ತೀರ ಸಂಕಷ್ಟ ಜೀವನ ನಡೆಸುತ್ತಿದ್ದಾರೆ. ಭಾರತೀಯ ಸಮಾಜ ಪ್ರಾಚೀನ ಕಾಲದಿಂದ ಇಂದಿನವರೆಗೆ ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಿರುವ ದೇಶವಾಗಿದೆ. ಭಾರತೀಯ ಸಮಾಜದಲ್ಲಿ ವರ್ಣ ವ್ಯವಸ್ಥೆಯಿಂದ ಪ್ರಾರಂಭವಾಗಿ ನಂತರ ವರ್ಗವಾಗಿ ರೂಪಗೊಂಡು ಜಾತಿಯಾಗಿ ಬೆಳೆದುಕೊಂಡು ಬಂದಿದೆ.

ಸಾವಿರಾರು ಜಾತಿ – ಉಪಜಾತಿಗಳು, ಹಲವಾರು ಭಾಷೆಗಳು, ವಿವಿಧ ಧರ್ಮಗಳು, ವಿವಿಧ ಜನಾಂಗಗಳನ್ನು ಹೊಂದಿದ್ದರೂ ಎಲ್ಲರಿಗೂ ಸಮಾನತೆಯನ್ನು ಕಲ್ಪಿಸಿದೆ. ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎಂಬ ಸಮಾನ ಭಾವನೆಯನ್ನು ನಿರ್ಮಿಸಬೇಕಾಗಿದೆ. ಈ ನಿಟ್ಟಿನಲ್ಲಿ ನಮ್ಮನ್ನು ನಿರ್ದಿಷ್ಟ ಗುರಿಯ ಕಡೆಗೆ ಕರೆದುಕೊಂಡು ಹೋಗುವುದು ಶಿಕ್ಷಣದಿಂದ ಮಾತ್ರ ಸಾಧ್ಯ. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಯಶಸ್ವಿಯಾಗಬೇಕಾದರೆ ಎಲ್ಲರಿಗೂ ಶಿಕ್ಷಣ ಅಗತ್ಯ. ಯಾವುದೇ ವರ್ಗ, ವರ್ಣ, ಜನಾಂಗ, ಲಿಂಗ, ಧರ್ಮ ಮೊದಲಾದವುಗಳನ್ನು ಪರಿಗಣಿಸದೇ ಸಮಾನತೆಯನ್ನು ಅನುಷ್ಠಾನಗೊಳಿಸಬೇಕಾಗುತ್ತದೆ. ಸಂವಿಧಾನದಲ್ಲಿ ಉಲ್ಲೇಖವಿರುವ ಸಮಾನತೆಯ ಅಂಶವು ಕೇವಲ ಅಕ್ಷರ ರೂಪದಲ್ಲಿ ಉಳಿಯದೇ ಜಾರಿಯಾಗಬೇಕಾದ ಅನಿವಾರ್ಯತೆ ಇದೆ. ಅದರಲ್ಲೂ ಅನೇಕ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಸರ್ಕಾರ ಮಾತ್ರವಲ್ಲದೆ ಸರ್ಕಾರೇತರ ಸಂಘ ಸಂಸ್ಥೆಗಳೂ ಮತ್ತು ಸಾರ್ವಜನಿಕರೂ ಸಹ ಕೈಜೋಡಿಸಿದಾಗ ಮಾತ್ರ ಯಶಸ್ಸನ್ನು ಸಾಧಿಸಬಹುದಾಗಿದೆ.

ಸಮಾಜವು ನಿಂತ ನೀರಿನಂತಿರದೆ ಸದಾ ಹರಿಯುವ ನೀರಿನಂತೆ ನಿತ್ಯ ಪರಿವರ್ತನಾಶೀಲವಾದುದು. ಸಮುದಾಯಗಳು ಪರಿವರ್ತನೆಗೆ ಒಗ್ಗಿಕೊಳ್ಳುತ್ತಿರುತ್ತವೆ. ಪ್ರಸ್ತುತ ಅಧ್ಯಯನವು ಕೊಳಗೇರಿ ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಗಮನದಲ್ಲಿಟ್ಟುಕೊಂಡು ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರ ಜೀವನ ಮಟ್ಟ, ಆರೋಗ್ಯ, ಶಿಕ್ಷಣ, ಹಾಗೂ ಇವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಬಗ್ಗೆ ತಿಳಿಯುವುದು ಈ ಅಧ್ಯಯನದ ಮುಖ್ಯ ಅಗತ್ಯವಾಗಿದೆ.

## ಅಧ್ಯಯನದ ಉದ್ದೇಶಗಳು

1. ಕೊಳಗೇರಿ ಪ್ರದೇಶಗಳು ನಿರ್ಮಾಣವಾಗಲು ಕಾರಣವಾಗುವ ಅಂಶಗಳನ್ನು ಕುರಿತು ಅಧ್ಯಯನ ಮಾಡುವುದು.
2. ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಶೈಕ್ಷಣಿಕ ಮಟ್ಟವನ್ನು ಅಧ್ಯಯನ ಮಾಡುವುದು.
3. ಕೊಳಗೇರಿ ನಿವಾಸಿಗಳ ಆರ್ಥಿಕ ಸ್ಥಿತಿಯನ್ನು ಹಾಗೂ ಜೀವನದ ಗುಣಮಟ್ಟ ಕುರಿತು ಅಧ್ಯಯನ ಮಾಡುವುದು.
4. ಕೊಳಗೇರಿ ಮಹಿಳೆಯರ ಮತ್ತು ಮಕ್ಕಳ ಪೌಷ್ಠಿಕ ಆಹಾರ ಸಮಸ್ಯೆ ಹಾಗೂ ಮೂಲಭೂತ ಸೌಲಭ್ಯಗಳನ್ನು ಗುರ್ತಿಸುವುದು ಹಾಗೂ ಸೂಕ್ಷ್ಮ ಪರಿಹಾರಗಳನ್ನು ತಿಳಿಸುವುದು.

## 1.4 ಅಧ್ಯಯನದ ವ್ಯಾಪ್ತಿ

ಈ ಸಂಪ್ರಬಂಧವು ಕ್ಷೇತ್ರಕಾರ್ಯದ ವ್ಯಾಪ್ತಿಯನ್ನಾಗಿ ಹೊಸಪೇಟೆ ತಾಲ್ಲೂಕಿನ ಕೆಲವೊಂದು ನಗರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಒಟ್ಟಾರೆಯಾಗಿ ಒಬ್ಬ ಸಂಶೋಧನಾ ವಿದ್ಯಾರ್ಥಿ ಒಂದು ಅಧ್ಯಯನವವನ್ನು ಪರಿಪೂರ್ಣವಾಗಿ ಅಥವಾ ಸ್ಪಷ್ಟ ಮತ್ತು ವಸ್ತುನಿಷ್ಟವಾಗಿ ಎಲ್ಲಾ ಆಕರಗಳನ್ನೊಳಗೊಂಡಂತೆ ಸಂಶೋಧನಾ ಕಾರ್ಯ ನಿರ್ವಹಿಸಬೇಕಾದರೆ ಅಧ್ಯಯನಕ್ಕೆ ಒಂದು ನಿರ್ದಿಷ್ಟವಾದ ವ್ಯಾಪ್ತಿ ಇರುವುದು ಅವಶ್ಯಕ. ಆಗ ಮಾತ್ರ ಈ ಕ್ಷೇತ್ರದಲ್ಲಿ ಯಶಸ್ಸನ್ನು ಸಾಧಿಸಬಹುದು. ಈ ದೃಷ್ಟಿಯಿಂದ **'ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ' (ಹೊಸಪೇಟೆ ನಗರದ ಸ್ಲಂಗಳನ್ನು ಪರಿಗಣಿಸಿ)** ಎಂಬ ಶೀರ್ಷಿಕೆಯ ಅಡಿಯಲ್ಲಿ (371ಜೆ) ಹೈದರಾಬಾದ್ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಕೊಳಗೇರಿ ನಿವಾಸಿಗರನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

ಜನಸಂಖ್ಯೆಯ ದೃಷ್ಟಿಯಿಂದ ಅಧ್ಯಯನಕ್ಕೆ ಆಯ್ದುಕೊಂಡ ಹೊಸಪೇಟೆ ನಗರದ' ಕೊಳಗೇರಿ ನಿವಾಸಿಗರನ್ನು ಅಧ್ಯಯನ ಮಾಡಲಾಗುತ್ತದೆ. ಅಧ್ಯಯನದ ಕ್ಷೇತ್ರಕಾರ್ಯ ಕೈಕೊಂಡು ಮಾಹಿತಿದಾರರನ್ನು ಸಂದರ್ಶಿಸಿ ಅಲ್ಲಿನ ಸಾಮಾಜಿಕ ಹಾಗೂ ಆರ್ಥಿಕ ಹಾಗೂ ಮೂಲಭೂತ ಸೌಲಭ್ಯಗಳ ಕೊರತೆಯನ್ನು ಅಲ್ಲಿನ ಜನರ ಜೀವನ ಮಟ್ಟವನ್ನು ಅವಲೋಕಿಸಿ ಅವರ ತಿಳುವಳಿಕೆಯ ಆಧಾರದ ಮೇಲೆ ನೀಡಿದ ಮಾಹಿತಿಯಿಂದ ಈ ಸಂಪ್ರಬಂಧವನ್ನು ಸಿದ್ದಪಡಿಸಲಾಗುತ್ತದೆ.

## 1.5 ಅಧ್ಯಯನದ ಪ್ರಾಕಲ್ಪನೆಗಳು ಅಥವಾ ಊಹೆಗಳು

ಪ್ರತಿಯೊಂದು ಸಂಶೋಧನೆಯ ಪೂರ್ವದಲ್ಲಿ ವಿಷಯದ ಪ್ರಾಕಲ್ಪನೆಯನ್ನು ರಚಿಸಿಕೊಳ್ಳುವುದು ಸಾಮಾನ್ಯವಾದ ಸಂಗತಿಯಾಗಿದೆ. ಯಶಸ್ವಿ ಮತ್ತು ಪರಿಣಾಮಕಾರಿ ಸಂಶೋಧನೆಗೆ ಪ್ರಾಕಲ್ಪನೆಗಳು ಅಥವಾ ಊಹೆಗಳನ್ನು ಮಾಡಿಕೊಳ್ಳುವುದು ತುಂಬಾ ಅವಶ್ಯಕ.

**ಈ ಒಂದು ಅಧ್ಯಯನವು ಕೆಳಕಂಡ ಪ್ರಾಕಲ್ಪನೆಗಳು ಅಥವಾ ಊಹೆಗಳಿಂದ ರಚಿಸಿಕೊಳ್ಳಲಾಗಿದೆ.**

1. ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರು ಅನೇಕ ರೋಗಗಳಿಗೆ ತುತ್ತಾಗುತ್ತಾರೆ.
2. ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರು ಅಧಿಕವಾಗಿ ಸರ್ಕಾರದ ಪಡಿತರ ಚೀಟಿಯನ್ನು ಹೊಂದಿರುವುದಿಲ್ಲ.
3. ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರು ಯಾವುದೇ ಆಶ್ರಯ ವಸತಿಗಳನ್ನು ಹೊಂದಿರುವುದಿಲ್ಲ.

4. ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯು ಉತ್ತಮವಾಗಿರುವುದಿಲ್ಲ.

5. ಕೊಳಗೇರಿ ಪ್ರದೇಶದಲ್ಲಿ ಹೆಚ್ಚಿನ ಜನರು ಅನಕ್ಷರಸ್ಥರಾಗಿರುತ್ತಾರೆ.

6. ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರು ಬೇರೆ ಬೇರೆ ಕಡೆಯಿಂದ ವಲಸೆ ಬಂದವಾರಾಗಿರುತ್ತಾರೆ.

7. ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರು ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿರುತ್ತಾರೆ.

## 1.6 ಅಧ್ಯಯನದ ವಿಧಾನಗಳು

ಸಂಶೋಧನೆಯ ವಿಷಯವಾದ **"ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ" (ಹೊಸಪೇಟೆ ನಗರದ ಸ್ಲಂಗಳನ್ನು ಪರಿಗಣಿಸಿ)** ಈ ವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧನ ವಿಧಾನದ ಆಯ್ಕೆ ನಿರ್ದಿಷ್ಟವಾದ ಚೌಕಟ್ಟಿನೊಳಗೆ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಸಂಶೋಧನೆಯ ವಿಷಯವಾಗಿರುವ ಕೊಳಗೇರಿ ಪ್ರದೇಶದ ಅಧ್ಯಯನ ಸಂಪ್ರಬಂಧ ರೂಪದಲ್ಲಿ ಈ ಕೆಳಗಿನ ಸಂಶೋಧನ ವಿಧಾನವನ್ನು ಅನುಸರಿಸಲು ಉದ್ದೇಶಸಲಾಗಿದೆ.

1. **ಲಭ್ಯವಿರುವ ಆಕಾರಗಳ ಅಧ್ಯಯನ**
2. **ಐತಿಹಾಸಿಕ ವಿಧಾನ**
3. **ಪ್ರಶ್ನಾವಳಿ ವಿಧಾನ**
4. **ಸಂದರ್ಶನದ ವಿಧಾನ**
5. **ಅವಲೋಕನ ವಿಧಾನ**
6. **ಮಾಹಿತಿಯ ಅಥವಾ ಮಾದರಿ ವಿಧಾನಗಳು**
7. **ಸಂಖ್ಯಾಶಾಸ್ತ್ರೀಯ ವಿಧಾನ**
8. **ತೌಲನಿಕ ವಿಧಾನ**

### 1. ಲಭ್ಯವಿರುವ ಆಕಾರಗಳ ಅಧ್ಯಯನ

ಸ್ವಾತಂತ್ರ್ಯ ಪೂರ್ವದಿಂದ ಇಲ್ಲಿರುವವರೆಗೆ ನಡೆದ ಅಧ್ಯಯನಗಳನ್ನು ಪರಾಮರ್ಶಿಸುವುದು. ಮೌಖಿಕ ಸಾಹಿತ್ಯ ಪ್ರಧಾನ ಆಕರವೆಂದು ಅಧ್ಯಯನ ಮಾಡುವುದು.

## 2. ಐತಿಹಾಸಿಕ ವಿಧಾನ

ಸ್ಲಂ ಜನರ ಮೂಲದ ಬಗ್ಗೆ ತಿಳಿಯುವುಕ್ಕಾಗಿ ಲಭ್ಯವಾದ ಮೌಖಿಕ ಮತ್ತು ಲಿಖಿತ ಸಾಹಿತ್ಯದ ಆಕರಗಳ ಮೂಲಕ ಅಧ್ಯಯನ ಮಾಡಲಾಗಿದೆ. ಸ್ಲಂ ಜನರ ಮೌಖಿಕ ಸಾಹಿತ್ಯ, ಆಚರಣೆ, ಆರಾಧನಾ ಪರಂಪರೆ, ಸ್ಮಾರಕಗಳು ಮತ್ತು ವಿಧಾನಗಳನ್ನು ಪ್ರಧಾನವಾಗಿ ಮತ್ತು ಲಿಖಿತ ಆಕರಗಳನ್ನು ಅನುಷಗಿಂಕವಾಗಿ ಬಳಸಲಾಗಿದೆ.

## 3. ಪ್ರಶ್ನಾವಳಿ ವಿಧಾನ

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಪಡೆಯಲು ಆಯ್ದುಕೊಂಡ ಕ್ಷೇತ್ರದಲ್ಲಿ ಕ್ಷೇತ್ರಕಾರ್ಯ ಕೈಕೊಂಡಾಗ, ಆ ಪ್ರದೇಶದ ಕೊಳಗೇರಿ ಜನರು ಆರ್ಥಿಕತೆ ಮತ್ತು ಸಾಮಾಜಿಕತೆಗೆ ಸಂಬಂಧಿಸಿದಂತಹ ಮಾಹಿತಿಯನ್ನು ಪಡೆಯಲು ಅತ್ಯಂತ ಸೂಕ್ತವಾದಂತಹ ಪ್ರಶ್ನಾವಳಿಯನ್ನು ಸಿದ್ದಪಡಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗುತ್ತದೆ.

## 4. ಸಂದರ್ಶನ ವಿಧಾನ

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಕೊಳಗೇರಿ ಪ್ರದೇಶಕ್ಕೆ ಭೇಟಿ ಕೊಟ್ಟು ಅಲ್ಲಿರುವ ಕೊಳಗೇರಿ ಸಮಸ್ಯೆ ಮಹಿಳೆಯರು ಮತ್ತು ಮಕ್ಕಳ ಸ್ಥಿತಿಗತಿ ಬಗ್ಗೆ ಆರೋಗ್ಯದ ಮತ್ತು ಆರ್ಥಿಕತೆ ಸರ್ಕಾರ ಯೋಜನೆ ಅನುಷ್ಠಾನಗಳ ಬಗ್ಗೆ ಸಂಬಂಧಪಟ್ಟಂತಹ ಸಂದರ್ಶನದ ಮೂಲಕ ಮಾಹಿತಿಯನ್ನು ಪಡೆಯಲಾಗುವುದು.

## 5. ಅವಲೋಕನ ವಿಧಾನ

ಸಂದರ್ಶನಕಾರರು ಸಂದರ್ಶನಾರ್ಥಿಯನ್ನು ಸಂದರ್ಶಿಸುವಾಗ ಅವನ ಹಾವ-ಭಾವಗಳನ್ನು ಅವಲೋಕನ ಮಾಡಬೇಕಾಗುತ್ತದೆ. ಪ್ರತಿಯೊಂದು ಪ್ರಶ್ನೆಗೂ ಆರ್ಥಿಕವಾಗಿ ಯಾವ ರೀತಿಯ ಉತ್ತರ ಕೊಡುತ್ತಾನೆ. ಮತ್ತು ಉತ್ತರ ಕೊಡುವಾಗ ಅವನ ದೈಹಿಕ ಭಾಷೆ ಹೇಗಿರುತ್ತದೆ ಎನ್ನುವುದನ್ನು ಸಂದರ್ಶನಕಾರ ಅವಲೋಕಿಸಿದಾಗ ಅವನ ವಾಸ್ತವ ಸ್ಥಿತಿಗತಿಯ ಸಂಪೂರ್ಣ ಪರಿಚಯವಾಗುತ್ತದೆ. ಆದ್ದರಿಂದ ಅವಲೋಕನ ವಿಧಾನವನ್ನು ಬಳಸಿಕೊಳ್ಳಲಾಗುತ್ತದೆ.

## 6. ಮಾಹಿತಿಯ ಅಥವಾ ಮಾದರಿಗಳು

ಮಾಹಿತಿ ಅಥವಾ ಮಾದರಿಗಳ ಮೂಲಕ ಕ್ಷೇತ್ರಕಾರ್ಯದ ಮಾಹಿತಿ ಸಂಗ್ರಹಿಸುವುದು ಆಗಿದ್ದು. ಇದಕ್ಕೆ ಮುಖ್ಯವಾಗಿ ಪ್ರಶ್ನಾವಳಿಗಳು ಸಂದರ್ಶನ ವೈಧಾನಿಕತೆಗಳನ್ನು ಅನ್ವಯಿಸಲಾಗುವುದು. ಅನುಷಂಗಿಕ ಆಕರಗಳು, ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತಹ ನಿಯತಕಾಲಿಕಗಳು, ವೃತ್ತಪತ್ರಿಕೆ, ವಾರಪತ್ರಿಕೆ, ವರದಿಗಳು ಮೊದಲಾದವುಗಳನ್ನು ಗಮನಿಸಿ ಪೂರಕ ಮಾಹಿತಿಯನ್ನು ಸಂಗ್ರಹಿಸಲಾಗುವುದು.

7. ಸಂಖ್ಯಾಶಾಸ್ತ್ರೀಯ ವಿಧಾನ

ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಅಂಕಿ ಸಂಖ್ಯೆಗಳ ವಿಷಯಕ್ಕೆ ಸಂಬಂಧಿಸಿದಂತೆ ವರ್ಗೀಕರಣ ಮಾಡಿ ಅನೇಕ ಕೋಷ್ಟಕಗಳನ್ನು ಸಿದ್ಧಪಡಿಸಲಾಗಿದೆ.

8. ತೌಲನಿಕ ವಿಧಾನ :

ಸಂಶೋಧನೆಯಲ್ಲಿ ತೌಲನಿಕ ವಿಧಾನ ತುಂಬಾ ಅವಶ್ಯಕವಾಗಿದ್ದು ಸ್ಲಂ ಜನರಿಗೆ ಸಂಬಂಧಿಸಿದಂತೆ ಹಲವಾರು ವಿಚಾರಗಳನ್ನು ಅನ್ಯ ಸಮುದಾಯದ ಜೊತೆಗೆ ಹೋಲಿಸಿ ನೋಡುವುದಕ್ಕಾಗಿ ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

## 1.7 ಅಧ್ಯಯನದ ಮಹತ್ವ

ಭಾರತದಲ್ಲಿ ಕೊಳಗೇರಿ ಪ್ರದೇಶಗಳು ಬೇರೆ ಬೇರೆ ಪ್ರದೇಶಗಳಲ್ಲಿ ಕಂಡು ಬರುವಂತೆ ನಮ್ಮ ದೇಶದಲ್ಲಿಯೂ ಸಹ ಕಾಣುತ್ತೇವೆ. ಅವುಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತವೆ. ಇಲ್ಲಿ ವಾಸಿಸುವಂತಹ ನಿವಾಸಿಗಳು ವಿಶಿಷ್ಟ ಸಂಸ್ಕೃತಿ- ಸಂಪ್ರದಾಯಗಳು ಮತ್ತು ಪರಂಪರೆಯನ್ನು ಹೊಂದಿದ್ದಾರೆ. ಇದುವರೆಗೆ ಈ ವಿಚಾರಗಳನ್ನು ಕುರಿತಾದ ಸತ್ಯಾಂಶಗಳ ಅಧ್ಯಯನವು ವೈಜ್ಞಾನಿಕ ನೆಲೆಗಟ್ಟಿನಲ್ಲಿ ನಡೆಯದಿರುವುದು ಬಹಳ ಅಪರೂಪವೆನ್ನಬಹುದು.

ಕೊಳಗೇರಿ ನಿವಾಸಿಗಳ ಪರಂಪರೆ ಸಾಮಾಜಿಕ ಜೀವನ, ಆರ್ಥಿಕ ಸ್ಥಿತಿಗತಿಗಳು, ರಾಜಕೀಯ ಜೀವನದ ಸ್ವರೂಪ, ಧಾರ್ಮಿಕ ಜೀವನ, ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳು ಇತ್ಯಾದಿ. ವಿಷಯಗಳು ಹಾಗೂ ಪ್ರಸ್ತುತ ಕೊಳಗೇರಿ ನಿವಾಸಿಗರು ಎದುರಿಸುತ್ತಿರು ಸಮಸ್ಯೆಗಳಾದ ವಸತಿ, ಚರಂಡಿ, ಶೌಚಾಲಯ, ಬಡತನ, ಬಾಲ ಕಾರ್ಮಿಕ ಪದ್ಧತಿ, ಬಾಲ್ಯ ವಿವಾಹ, ದೇವದಾಸಿ ಪದ್ಧತಿ, ಬೀದಿ ದೀಪ ನಿರ್ವಹಣೆ, ಕುಡಿಯುವ ನೀರು, ಆರೋಗ್ಯ ಸಮಸ್ಯೆ ಇತ್ಯಾದಿ ಸಮಸ್ಯೆಗಳಿಂದ ಹೊರಬರಲು ಜನರಿಗೆ ಜಾಗೃತಿ ಮೂಡಿಸುವಲ್ಲಿ ಅವರ ಅರೋಗ್ಯವನ್ನು ಕಾಪಾಡಲು ಕೊಳಗೇರಿ ನಿವಾಸಿಗರ ಸಮಸ್ಯೆಗಳಿಗೆ ಪರಿಹಾರವನ್ನು ನೀಡುವ ದೃಷ್ಠಿಯಲ್ಲಿ ಈ ನನ್ನ ಅಧ್ಯಯನಯು ಮಹತ್ವವನ್ನು ಪಡೆಯುತ್ತದೆ.

ಕರ್ನಾಟಕದ ರಾಜ್ಯಾದ್ಯಂತ ಹರಡಿ ನೆಲೆಸಿರುವ ಕೊಳಗೇರಿ ನಿವಾಸಿಗರನ್ನು ಕುರಿತು ಇದುವರೆಗಿನ ಕೇವಲ ಕೆಲವೇ ಕೆಲವು ಅಧ್ಯಯನಗಳು ನಡೆದಿವೆ. ಕೆಲವು ಅಧ್ಯಯನಗಳು ಕೇವಲ ಮಾಹಿತಿಗಾಗಿಯಷ್ಟೇ ಅಧ್ಯಯನಗಳು ನಡೆದಿವೆ ಹೇಳಬಹುದು. ಈ ಕೊಳಗೇರಿ ನಿವಾಸಿಗರು ವಿಶಿಷ್ಟ ಸಾಂಸ್ಕೃತಿಕ ವೃತ್ತಿ ಕಸುಬಿನ ಪರಂಪರೆಯನ್ನು ಹೊಂದಿರುವುದಾದರೂ ಇದುವರೆಗಿನ ಸತ್ಯಾಂಶಗಳ ಅಧ್ಯಯನವು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಕ್ಷೇತ್ರಕಾರ್ಯದ ಮೂಲಕ ನಡೆದಿರುವುದು ಬಹಳ ಅಪರೂಪವೆನ್ನಲಾಗಿದೆ.

ಕೊಳಗೇರಿ ನಿವಾಸಿಗಾರ ಪರಂಪರೆ ಸಾಮಾಜಿಕ ಜೀವನ ಆರ್ಥಿಕ ಸ್ಥಿತಿಗತಿಗಳು, ರಾಜಕೀಯ ಜೀವನದ ಸ್ವರೂಪ, ಧಾರ್ಮಿಕ ಜೀವನ, ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳು ಇತ್ಯಾದಿ

ವಿಷಯಗಳು ಅಧ್ಯಯನದ ದೃಷ್ಟಿಯಿಂದ ಮಹತ್ವ ಪಡೆಯುತ್ತದೆ. ಕೃಷಿ ಸಂಬಂಧಿ ಚಟುವಟಿಗಳು ಮುರಿದು ಬಿದ್ದು, ಕೃಷಿಕರು ನೆಲೆತಪ್ಪಿದರು. ವ್ಯವಸಾಯಿ ಸಂರಚನೆಯಲ್ಲಿ ಮಹತ್ವ ಪಾತ್ರವಹಿಸುತಿದ್ದ ಕುಶಲಕರ್ಮಿಗಳು ಆರ್ಥಿಕತೆ ದಿಕ್ಕೆಟ್ಟು ಹೋಯಿತು. ರಾಷ್ಟ್ರೀಯ ಅರಣ್ಯ ಯೋಜನೆ, ವನ್ಯಜೀವಿ ಸಂರಕ್ಷಣೆ ಯೋಜನೆ, ಬೃಹತ್ ಯೋಜನೆಗಳ ಕಾರಣಗಳಿಗಾಗಿ ಅರಣ್ಯಗಳಿಂದ ಒಕ್ಕಲೆದ್ದ ಆದಿವಾಸಿಗಳು ಬಂದು ಸೇರಿದ್ದು ಈ ನಗರದಾಂಚಿನ ಕೊಳಕೇರಿಗಳಲ್ಲಿ.

ಜೊತೆಗೆ ಪ್ರಸ್ತುತ ಸಮಾಜದಲ್ಲಿ ಸಾಕಷ್ಟು ಸಮಸ್ಯೆಗಳನ್ನು ಕೊಳಗೇರಿ ನಿವಾಸಿಗಾರು ಎದುರಿಸುತ್ತಾರೆ. ಅಂತಹ ಸಮಸ್ಯೆಗಳೆಂದರೆ ವಸತಿ, ಶೌಚಾಲಯ, ಚರಂಡಿ ವ್ಯವಸ್ಯೆ ಸರಿಯಾಗಿ ಇಲ್ಲದೆ ಇರುವುದು. ಬಡತನ, ಬಾಲಕಾರ್ಮಿಕ ಪದ್ಧತಿ, ಬಾಲ್ಯ ವಿವಾಹ, ದೇವದಾಸಿ ಪದ್ಧತಿ, ಜಾತಿಯತೆ, ಬೀದಿ ದೀಪಗಳು, ಕುಡಿಯುವ ನೀರು, ರಾಜಕೀಯ, ನಿರುದ್ಯೋಗ, ಆರೋಗ್ಯ ಸಮಸ್ಯೆ ಇತ್ಯಾದಿ ಈ ಸಮಸ್ಯೆಗಳನ್ನು ಕೊಳಗೇರಿ ನಿವಾಸಿಗಳಲ್ಲಿ ಕಂಡು ಬರುತ್ತದೆ. ಇಂತಹ ಸಮಸ್ಯೆಗಳಿಗೆ ಸೂಕ್ತವಾದ ಈ ಪರಿಹಾರ ಕ್ರಮಗಳನ್ನು ಕಂಡುಕೊಂಡು ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿದಾಗ ಸಮಗ್ರ ಅಭಿವೃದ್ಧಿಯನ್ನು ಸಾಧಿಸಬಹುದು. ಕೊಳಗೇರಿ ನಿವಾಸಿಗಾರ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ರಾಜಕೀಯ ಅಂಶಗಳು ಅಧ್ಯಯನ ಮಾಡುವುದರ ಮೂಲಕ ಸಂಸ್ಕೃತಿಯ ಚಹರೆಯನ್ನು ಪರಿಚಯಿಸಬಹುದಾಗಿದೆ. ಈ ಕೊಳಗೆರಿ ನಿವಾಸಿಗರು ನಿರಂತರವಾಗಿ ವಿವಿಧ ಕ್ಷೇತ್ರಗಳಲ್ಲಿ ನಿರ್ಲಕ್ಷತೆಗೆ ಒಳಗಾಗಿರುವುದರಿಂದ ಅವರ ಸ್ವರೂಪವನ್ನು ವಿಶ್ಲೇಷಿಸಲಾಗುವುದು.

## 1.8 ಸಾಹಿತ್ಯ ಪರಾಮರ್ಶೆ ಅಥವಾ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ನಮ್ಮ ಜ್ಞಾನವೃದ್ಧಿಗಾಗಿ ಪುಸ್ತಕಗಳು ಅವಶ್ಯವಾಗಿ ಬೇಕೆ ಬೇಕು. ಒಂದು ಸಂಶೋಧನೆಯು ಯಶಸ್ಸನ್ನು ಸಾಧಿಸಲು ಮೂಲಾಧಾರಗಳು ಅತ್ಯಾವಶ್ಯಕ. ಕ್ಷೇತ್ರಕಾರ್ಯವು ನಮ್ಮ ಸಂಶೋಧನೆಗೆ ಸ್ಪಷ್ಟವಾದ ಚಿತ್ರಣವನ್ನು ನೀಡುವ ದಾರಿದೀಪ, ಇದಲ್ಲದೆ ಪುಸ್ತಕಗಳು ಕೂಡ ಸಹಕಾರಿಯಾಗುತ್ತವೆ. **'ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ' (ಹೊಸಪೇಟೆ ನಗರದ ಸ್ಲಂಗಳನ್ನು ಪರಿಗಣಿಸಿ)** ಎಂಬ ಈ ಒಂದು ಅಧ್ಯಯನದ ಸಂಶೋಧನ ಸಂಪ್ರಬಂಧಕ್ಕೆ ಅನುಕೂಲವಾಗುವಂತಹ ಇನ್ನಿತರ ಕೃತಿಗಳು ಮತ್ತು ಲೇಖನಗಳು ರಚಿತವಾಗಿವೆ. ಒಟ್ಟಾರೆಯಾಗಿ ಇದುವರೆಗೂ ಕೊಳಗೇರಿ ನಿವಾಸಿಗರ'ನ್ನೂ ಕುರಿತು ನಡೆದಿರುವ ಅಧ್ಯಯನಗಳನ್ನು ಕೆಳಗಿನಂತೆ ಸಂಕ್ಷಿಪ್ತವಾಗಿ ಪರಿಶೀಲಿಸಲಾಗಿದೆ.

- **ವಿಶ್ವಸಂಸ್ಥೆಯ ನಗರ ಭೂ ನೀತಿಯ ಪ್ರಕಾರ**

ಕಿಕ್ಕರಿದ ಜನಸಂದಣಿ ಶಿತಲಗೊಂಡ ನೈರ್ಮಲ್ಯ ರಹಿತವಾದ ಒಂದು ಇಲ್ಲವೇ ಕಟ್ಟಡಗಳ ಗುಂಡಾಗಿದ್ದು ಈ ಪರಿಸ್ಥಿತಿಗಳಲ್ಲಿ ಯಾವದಾದರು ಒಂದು ಸ್ಥಿತಿಯಿಂದ ಇಲ್ಲವೇ ಎಲ್ಲಾ ಸ್ಥಿತಿಗಳಿಂದ ನಿವಾಸಿಗಳು ಸಮುದಾಯಗಳ ಆರೋಗ್ಯ ರಕ್ಷಣೆ ಮತ್ತು ನೈತಿಕ ಜೀವನಕ್ಕೆ ಸಹಕಾರಿಯಾಗಿರುತ್ತವೆ. ಈ ಒಂದು ವರದಿಯ ಪ್ರಕಾರ ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರು ವಾಸಿಸಲು ವಸತಿಗೃಹಗಳನ್ನು ನಿರ್ಮಿಸುವುದು. ಅವರ ಆರೋಗ್ಯವನ್ನು ಕಾಪಾಡಿ ಅವರ ದುಡಿಮೆಗೆ ತಕ್ಕ ಅಧಿಕವಾದ ಕೂಲಿಯನ್ನು ನೀಡಿ ಜೀವನ ಮಟ್ಟವನ್ನು ಸುಧಾರಿಸುವುದಾಗಿದೆ.

- **ಹೆಚ್. ಜೋಲಬಾಗ್ ಎಂಬ ಚಿಂತಕರ ಪ್ರಕಾರ**

ಕೊಳಗೇರಿ ಪ್ರದೇಶದಲ್ಲಿ ವಾಸಿಸುವವರ ಬಡತನವು ಅಧಿಕವಾಗಿದ್ದು ಅವರುಗಳು ಜೋಪಾಡಿಗಳನ್ನು ನಿರ್ಮಿಸಿಕೊಂಡರು. ಮನೆಯಿಲ್ಲದವರು ಅಧಿಕವಾಗಿ ಜನನ ಮತ್ತು ಮರಣ ದರಗಳನ್ನು ಕಾಣುವುದಾಗಿದೆ. ಇವರ ನೈತಿಕವಾಗಿ ಸಣ್ಣ ಪುಟ್ಟ ಅಂಗಡಿಗಳಲ್ಲಿ ಮತ್ತು ಕೈಗಾರಿಕೆಗಳಲ್ಲಿ ಕಾರ್ಯನಿರ್ವಹಿಸುವ ಜನಸಮುದಾಯಗಳಾಗಿವೆ.

- **ನಂಬಿಯಾರ ಎಂಬ ಚಿಂತಕರ ಪ್ರಕಾರ**

ಕೊಳಚೆ ಪ್ರದೇಶವು ಅಸನಿಯವಾದ ವಾತಾವರಣವುಳ್ಳ ಜೋಪಾಡಿಗಳು ಹೊಂದಿರುವ ಪ್ರದೇಶವನ್ನು ಕೊಳಗೇರಿ ಎಂದು ಕರೆಯುತ್ತಾರೆ. ಕೊಳಚೆ ಪ್ರದೇಶವು ಒಂದು ಗಲಿಜು ವಾತಾವರಣವುಳ್ಳ ಒಂದು ಪ್ರದೇಶವಾಗಿದೆ. ಈ ಒಂದು ಪ್ರದೇಶದಲ್ಲಿ ರೋಗಗಳು ಅಧಿಕಗೊಂಡಿದ್ದು ಇವರುಗಳು ಗುಡಿಸಲು ಮನೆಗಳಲ್ಲಿ ವಾಸಿಸುವ ಜನರಾಗಿದ್ದಾರೆ.

- **ಮೈಸೂರು ನಗರಸಭೆಯ 1979ರ ವರದಿಯ ಪ್ರಕಾರ**

ಮೈಸೂರು ನಗರಗಳಲ್ಲಿ ಒಟ್ಟು 8 ಕೊಳಚೆ ಪ್ರದೇಶಗಳು ಕಂಡು ಬಂದಿದ್ದು, ಆ ಒಂದು ಕೊಳಚೆ ಪ್ರದೇಶದಲ್ಲಿ ಪುನಾರ್ವಸತಿ ಕಲ್ಪಿಸಲು 8.34 ಲಕ್ಷ ರೂಪಾಯಿಗಳನ್ನು ಈ ಯೋಜನೆಯಲ್ಲಿ ಜಾರಿಗೊಳಿಸಿತು. ಈ ಒಂದು ಯೋಜನೆಯಲ್ಲಿ ಕೊಳಚೆ ಪ್ರದೇಶದಲ್ಲಿ ನಿರ್ಮೂಲನೆ ಪ್ರಮುಖ ಉದ್ದೇಶವಾಗಿದೆ.

- **ಎರಿಕ್ ಪ್ರಾರ್ಟ್ರಿಡ್ಸ್ ಎಂಬ ಚಿಂತಕರ ಪ್ರಕಾರ**

ಜಿಲ್ಲೆ ನಗರ ಮತ್ತು ಪಟ್ಟಣ ಬೀದಿಗಳಲ್ಲಿ ಅಂಗಳದಲ್ಲಿ ತುಂಬಿರುವ ಕೆಳವರ್ಗ ಮತ್ತು ಬಡವರ್ಗದವರು ವಾಸಸ್ಥಳ ಇಂತಹ ಬೀದಿಗಳ ಸಂಖ್ಯೆ ಹೆಚ್ಚಿದ್ದು, ಕಿಕ್ಕರಿದ ಜನಸಂದಣಿಯಿಂದಿಚೆಗೆ ದುರ್ಗುಣ ಮತ್ತು ದುರ್ವಾಸನೆ ದುರ್ನಡೆತೆಯ ಕೂಪವಾಗಿರುತ್ತದೆ.

- **ಮುಂಬೈ ಪುರಸಭಾ ಕಾರ್ಪೋರೇಷನ್ ಕಾಯಿದೆ ಪ್ರಕಾರ**

ಕೊಳಗೇರಿ ಪ್ರದೇಶಗಳ ನಿರ್ಮೂಲನೆಕ್ಕಾಗಿ ಕೇಂದ್ರದಿಂದ ರಾಜ್ಯ ಸರ್ಕಾರಗಳಿಗೆ ಧನಸಹಾಯ ದೊರೆಕಿಸಿ ಕೊಳಗೇರಿ ಪ್ರದೇಶದಲ್ಲಿ ಕಟ್ಟಡಗಳನ್ನು ಉರುಳಿಸಿ, ಭೂಮಿಯನ್ನು ವಶಪಡಿಸಿಕೊಳ್ಳಲು ಅವಕಾಶ ದೊರೆಕಿಸಿದೆ.

- **ಕಲ್ಕತ್ತಾ ಪುರಸಭಾ ಕಾಯಿದೆ**

ಕಲ್ಕತ್ತಾ ಪುರಸಭಾ ಕಾರ್ಪೋರೇಷನ್ ಕಾಯಿದೆ, ಈ ಕಾಯಿದೆಗಳು ಕೊಳಗೇರಿ ಪ್ರದೇಶಗಳ ನಿರ್ಮೂಲನಕ್ಕಾಗಿ ಕೇಂದ್ರದಿಂದ ರಾಜ್ಯ ಸರಕಾರಗಳಿಗೆ ಧನಸಹಾಯ ದೊರಕಿಸಿ, ಕೊಳಗೇರಿ ಪ್ರದೇಶಗಳಲ್ಲಿ ಕಟ್ಟಡಗಳನ್ನು ಉರುಳಿಸಿ ಭೂಮಿಯನ್ನು ವಶಪಡಿಸಿಕೊಳ್ಳಲು ಅವಕಾಶ ದೊರೆಕಿಸುತ್ತದೆ.

- **ಸಾಮಾಜಿಕ ಸಮಸ್ಯೆಗಳು – ಕೆ. ಭೈರಪ್ಪ**

ಇವರು ತಮ್ಮ ಒಂದು ಕೃತಿಯಲ್ಲಿ ಜನರು ನಿರುದ್ಯೋಗದಿಂದ ಸಮಾಜದಲ್ಲಿದ್ದು ಇವರು ಹಳ್ಳಿಗಳಿಂದ ನಗರಗಳಿಗೆ ಉದ್ಯೋಗಕ್ಕಾಗಿ ವಲಸೆ ಬರುತ್ತಾರೆ. ಅಲ್ಲದೆ ಇವರು ಆದಾಯಗಳಿಸುವ ಉದ್ದೇಶವನ್ನು ಹೊಂದಿ ನಗರಕ್ಕೆ ಬರುತ್ತಾರೆ. ಬಂದ ನಂತರ ಇವರಿಗೆ ನಗರದಲ್ಲಿ ಯಾವುದೇ ಉದ್ಯೋಗವು ದೊರೆಯದೆ ಸಂದರ್ಭದ ಇವರು ಕೊಳಗೇರಿ ಪ್ರದೇಶದಲ್ಲಿ ವಾಸವಾಗಿರುತ್ತಾರೆ.

- **ವಿಶ್ವಸಂಸ್ಥೆಯ ವರದಿ ಪ್ರಕಾರ**

ಜಗತ್ತಿನಲ್ಲಿ ಪ್ರತಿಯೊಂದು ದಿನಾಚರಣೆಗಳಿದ್ದು ಪ್ರತಿವರ್ಷ ಅಕ್ಟೊಬರ್ 07 ರಂದು ಅಂತರಾಷ್ಟ್ರೀಯ ವಾಸಸ್ಥಾನ ದಿನವೆಂದು ಘೋಷಿಸಲಾಗಿದೆ. ಹಳ್ಳಿಗಳಿಂದ ಜನರು ನಗರ ಪ್ರದೇಶಗಳಿಗೆ ವಲಸೆ ಬರುತ್ತಾರೆ. ಅವರಿಗೆ ಸರ್ಕಾರ ಸೂಕ್ತ ರೀತಿಯ ಆರ್ಥಿಕ ನೇರವನ್ನು ಒದಗಿಸುವುದು ಪ್ರಮುಖ ಉದ್ದೇಶವಾಗಿದೆ.

- **ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿ – 1979**

ಕೊಳಚೆ ಪ್ರದೇಶದಲ್ಲಿ ವಾಸಿಸುವ ಜನರಿಗೆ ಮೂಲ, ಸೌಕರ್ಯಗಳನ್ನು, ಒದಗಿಸಲು ಸರ್ಕಾರವು ಉದ್ದೇಶವನ್ನು ಹೊಂದಿ ಒಳಚರಂಡಿ ವ್ಯವಸ್ಥೆಯನ್ನು ಒದಗಿಸುವುದು ಮತ್ತು ಸ್ವಚ್ಛಗೃಹಗಳನ್ನು ನಿರ್ಮಾಣ ಮಾಡುವುದು ಮತ್ತು ಸ್ವಚ್ಛತೆಯನ್ನು ಕಾಪಾಡುವುದು ಮತ್ತು ಇವರಿಗೆ ಆರೋಗ್ಯದ ಬಗ್ಗೆ ಮಾಹಿತಿಯನ್ನು ನೀಡುವುದು.

## 1.9 ಅಧ್ಯಯನದ ಸ್ವರೂಪ

ಪ್ರಸ್ತುತ ಕೈಕೊಂಡ ಸಂಪ್ರಬಂಧದ'ಲ್ಲಿ ಮುಖ್ಯವಾಗಿ ಆರು ಅಧ್ಯಯನಗಳನ್ನು ಒಳಗೊಂಡಿದೆ. ಈ ಅಧ್ಯಯನದಲ್ಲಿ ತೆಗೆದು ಕೊಂಡಂತಹ ಅಧ್ಯಾಯಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

**ಅಧ್ಯಯನ ಒಂದು : ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ**

ಪ್ರಸ್ತುತ ಮೊದಲೆಯ ಅಧ್ಯಯನದಲ್ಲಿ ಪ್ರಸ್ತಾವನೆ, ಪದನಿಷ್ಪತ್ತಿ, ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಪ್ರಾಕಲ್ಪನೆಗಳು ಅಥವಾ ಊಹೆಗಳು, ಅಧ್ಯಯನದ ವಿಧಾನಗಳು, ಅಧ್ಯಯನದ ಮಹತ್ವ, ಸಾಹಿತ್ಯ ಪರಾಮರ್ಶೆ ಅಥವಾ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ, ಅಧ್ಯಯನದ ಸ್ವರೂಪವನ್ನು ಕುರಿತು ಅಧ್ಯಯನ ಮಾಡಲಾಗಿದೆ.

**ಅಧ್ಯಯನ ಎರಡು : ಅಧ್ಯಯನಕ್ಕೊಳಪಡುವ ಕೊಳೆಗೇರಿಯ ಭೌಗೋಳಿಕ ವಿವರಗಳು**

ಪ್ರಸ್ತುತ ಎಡನೇಯ ಅಧ್ಯಯನದಲ್ಲಿ ಹೊಸಪೇಟೆ ತಾಲ್ಲೂಕಿನ ನಕಾಶೆ, ಸ್ಲಂಗಳ ಭೌಗೋಳಿಕ ಹಿನ್ನೆಲೆ, ಸ್ಲಂಗಳಲ್ಲಿನ ವಿವಿಧ ಸಮುದಾಯಗಳು ಮತ್ತು ಜನಸಂಖ್ಯೆ, ಮೂಲಭೂತ ಸೌಕರ್ಯಗಳು, ಸ್ಥಳೀಯ ಆಡಳಿತವನ್ನು ವಿಶ್ಲೇಷಿಸಲಾಗಿದೆ

**ಅಧ್ಯಯನ ಮೂರು : ಕೊಳೆಗೇರಿಯಲ್ಲಿನ ಸಮುದಾಯಗಳ ಸಾಮಾಜಿಕ ಹಿನ್ನೆಲೆ ಮತ್ತು ಸ್ಥಿತಿಗತಿಗಳು**

ಪ್ರಸ್ತುತ ಮೂರನೇಯ ಅಧ್ಯಯನದಲ್ಲಿ ಕುಟುಂಬದ ಸ್ವರೂಪ, ವೈವಾಹಿಕ ಸ್ಥಿತಿ, ಕೊಳಗೇರಿ ನಿವಾಸಿಗಳ ಆಚರಣೆಗಳು, ಜನನ ಮತ್ತು ಮರಣ ನಡುವಿನ ಸಂಸ್ಕಾರಗಳು, ಕೊಳಗೇರಿ ನಿವಾಸಿಗಳ ವಯೋಮಾನ, ಆರೋಗ್ಯ ಮತ್ತು ಆಹಾರ ಪದ್ಧತಿ, ದೈವಾರಾಧನೆ, ಉಡುಗೆ – ತೊಡುಗೆಗಳು ಮುಂತಾದ ಸಂಗತಿಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

**ಅಧ್ಯಯನ ನಾಲ್ಕು : ಕೊಳೆಗೇರಿಯಲ್ಲಿನ ಸಮುದಾಯಗಳ ಆರ್ಥಿಕ ಹಿನ್ನೆಲೆ ಮತ್ತು ಸ್ಥಿತಿಗತಿಗಳು**

ನಾಲ್ಕನೇಯ ಅಧ್ಯಯನದಲ್ಲಿ ಸಮುದಾಯಗಳ ಪಾರಂಪರಿಕ ಕುಲಕಸುಬುಗಳು ಮತ್ತು ಆದಾಯ, ವ್ಯಾಪಾರ ಮತ್ತು ಒಕ್ಕಲುತನ, ವಯೋಗುಂಪುವಾರು ಜನಸಂಖ್ಯೆ ವಿವರ, ಲಿಂಗಾನುಪಾತ, ಮನೆಗಳ ಮಾದರಿಯ ವಿವರ, ವಲಸೆ, ಮನೆ ಕಟ್ಟುವ ಕೆಲಸಗಾರರು ಯಾವ ರೀತಿ ಜೀವನ ನಡೆಸುತ್ತಿದ್ದಾರೆ ಎಂಬುದರ ಬಗ್ಗೆ ಅಧ್ಯಯನ ಮಾಡಲಾಗಿದೆ.

**ಅಧ್ಯಯನ ಐದು : ಸಂಘಟನೆ, ರಾಜಕೀಯ ಎಚ್ಚರ ಮತ್ತು ವರ್ತಮಾನದ ಸ್ಥಿತಿಗತಿಗಳು**

ಪ್ರಸ್ತುತ ಈ ಒಂದು ಅಧ್ಯಯನದಲ್ಲಿ ಶಿಕ್ಷಣ, ರಾಜಕೀಯ ಸ್ಥಿತಿಗತಿ, ಸಹಕಾರಿ ಸಂಘಗಳು, ಕೊಳಗೇರಿ ಸಮುದಾಯಗಳ ಸಂಘಟನೆ ಮತ್ತು ಹೋರಾಟ, ರಾಜಕೀಯ ಮೀಸಲಾತಿ ಬಳಕೆ ಮತ್ತು

ಅಭಿವೃದ್ಧಿ, ಸರ್ಕಾರದ ಮೂಲಭೂತ ಸೌಕರ್ಯಗಳು, ರಾಜಕೀಯ ಪ್ರಜ್ಞೆ ಮತ್ತು ಪಾಲ್ಗೊಳ್ಳುವಿಕೆ, ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ವಿಶ್ಲೆಷಿಸಲಾಗಿದೆ.

**ಅಧ್ಯಯನ ಆರು : ಸಮಾರೋಪ**

ಪ್ರಸ್ತುತ ಆರನೇಯ ಅಧ್ಯಯನದಲ್ಲಿ ಸಮಾರೋಪ, ಪರಿಹಾರೋಪಾಯಗಳು, ಪರಾಮರ್ಶನ ಗ್ರಂಥಗಳು, ಅನುಬಂಧಗಳು, ನಕಾಶೆ, ಅಂಕಿ ಅಂಶಗಳ ಪಟ್ಟಿ, ಪ್ರಶ್ನಾವಳಿ, ಹಾಗೂ ಭಾವಚಿತ್ರಗಳನ್ನು ತಿಳಿಸಲಾಗಿದೆ.

**ಸಮಾರೋಪ**

ಪ್ರಸ್ತುತ ಮೊದಲೆಯ ಅಧ್ಯಯನದಲ್ಲಿ ಪ್ರಸ್ತಾವನೆ, ಪದನಿಷ್ಪತ್ತಿ, ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಪ್ರಾಕಲ್ಪನೆಗಳು ಅಥವಾ ಊಹೆಗಳು, ಅಧ್ಯಯನದ ವಿಧಾನಗಳು, ಅಧ್ಯಯನದ ಮಹತ್ವ, ಸಾಹಿತ್ಯ ಪರಾಮರ್ಶೆ ಅಥವಾ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ, ಅಧ್ಯಯನದ ಸ್ವರೂಪವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಸಮಾಜದಲ್ಲಿ ಸಾಕಷ್ಟು ಸಮಸ್ಯೆಗಳನ್ನು ಕೊಳಗೇರಿ ನಿವಾಸಿಗಾರು ಎದುರಿಸುತ್ತಾರೆ. ಅಂತಹ ಸಮಸ್ಯೆಗಳೆಂದರೆ ವಸತಿ, ಶೌಚಾಲಯ, ಚರಂಡಿ ವ್ಯವಸ್ಥೆ ಸರಿಯಾಗಿ ಇಲ್ಲದೆ ಇರುವುದು. ಬಡತನ, ಬಾಲಕಾರ್ಮಿಕ ಪದ್ಧತಿ, ಬಾಲ್ಯ ವಿವಾಹ, ದೇವದಾಸಿ ಪದ್ಧತಿ, ಜಾತಿಯತೆ, ಬೀದಿ ದೀಪಗಳು, ಕುಡಿಯುವ ನೀರು, ರಾಜಕೀಯ, ನಿರುದ್ಯೋಗ, ಆರೋಗ್ಯ ಸಮಸ್ಯೆ ಇತ್ಯಾದಿ ಈ ಸಮಸ್ಯೆಗಳನ್ನು ಕೊಳಗೇರಿ ನಿವಾಸಿಗಳಲ್ಲಿ ಕಂಡು ಬರುತ್ತದೆ.

ಇಂತಹ ಸಮಸ್ಯೆಗಳಿಗೆ ಸೂಕ್ತವಾದ ಈ ಪರಿಹಾರ ಕ್ರಮಗಳನ್ನು ಕಂಡುಕೊಂಡು ಕೊಳಗೇರಿ ನಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿದಾಗ ಸಮಗ್ರ ಅಭಿವೃದ್ಧಿಯನ್ನು ಸಾಧಿಸಬಹುದು. ಕೊಳಗೇರಿ ನಿವಾಸಿಗಾರ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ರಾಜಕೀಯ ಅಂಶಗಳು ಅಧ್ಯಯನ ಮಾಡುವುದರ ಮೂಲಕ ಸಂಸ್ಕೃತಿಯ ಚಹರೆಯನ್ನು ಪರಿಚಯಿಸಬಹುದಾಗಿದೆ. ಈ ಕೊಳಗೆರಿ ನಿವಾಸಿಗರು ನಿರಂತರವಾಗಿ ವಿವಿಧ ಕ್ಷೇತ್ರಗಳಲ್ಲಿ ನಿರ್ಲಕ್ಷತೆಗೆ ಒಳಗಾಗಿರುವುದರಿಂದ ಅವರ ಸ್ವರೂಪವನ್ನು ವಿಶ್ಲೇಷಿಸಲಾಗುವುದು.

ಇದರಲ್ಲಿ ಮುಖ್ಯವಾಗಿ ಅಧ್ಯಯನದ ಗುರಿಗಳು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಪ್ರಸ್ತುತ ಈ ಅಧ್ಯಯನವು ಕೋಳಗೇರಿ ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಗಮನದಲ್ಲಿಟ್ಟುಕೊಂಡು ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಜನರ ಜೀವನ ಮಟ್ಟ, ಆರೋಗ್ಯ, ಶಿಕ್ಷಣ,

ಹಾಗೂ ಇವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಬಗ್ಗೆ ತಿಳಿಯುವುದು ಈ ಅಧ್ಯಯನದ ಮುಖ್ಯ ಅಗತ್ಯವಾಗಿದೆ.

## ಅಡಿಟಿಪ್ಪಣಿ

1. ಕೊಳಗೇರಿ ನಿರ್ಮೂಲನ ಮಂಡಳಿ – **ಸ್ಲಂ ಜಗತ್ತು** – ಎಲ್.ಆರ್. ನಗರ ಬೆಂಗಳೂರು. ಪು.ಸ. – 23
2. ಶಂಕರರಾವ್ ಚ.ನ. – **ಸಾಮಾಜಿಕ ಸಂಶೋಧನೆಯ ಕೈಪಿಡಿ** – ಜೈ ಭಾರತ ಪ್ರಕಾಶನ ಮಂಗಳೂರು – 2005. ಪು.ಸ. – 60
3. ಚಂದ್ರಪೂಜಾರಿ ಎಂ. – **ಸಂಶೋಧಕರು ಮತ್ತು ಕ್ಷೇತ್ರಕಾರ್ಯ** – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ – 2005. ಪು.ಸ. – 22
4. ಚಂದ್ರಪೂಜಾರಿ ಎಂ. – **ಸಂಶೋಧನಾ ಪ್ರಸ್ತಾವ** – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ – 2008. ಪು.ಸ. – 15
5. ಚಂದ್ರಪೂಜಾರಿ ಎಂ. – **ಸಮಾಜ ಸಂಶೋಧನೆ** – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ – 2005. ಪು.ಸ. – 30
6. ಚಂದ್ರಪೂಜಾರಿ ಎಂ. – **ಸಂಶೋಧನೆ ಏನು? ಏಕೆ? ಹೇಗೆ?** – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ – 2009. ಪು.ಸ. – 23

# ಅಧ್ಯಾಯ – 02

## 2. ಅಧ್ಯಯನಕ್ಕೊಳಪಡುವ ಕೊಳೆಗೇರಿಯ ಭೌಗೋಳಿಕ ವಿವರಗಳು

2.1 ಹೊಸಪೇಟೆ ತಾಲ್ಲೂಕಿನ ನಕಾಶೆ

2.2 ಸ್ಲಂಗಳ ಭೌಗೋಳಿಕ ಹಿನ್ನೆಲೆ

2.3 ಸ್ಲಂಗಳಲ್ಲಿನ ವಿವಿಧ ಸಮುದಾಯಗಳು ಮತ್ತು ಜನಸಂಖ್ಯೆ

2.4 ಮೂಲಭೂತ ಸೌಕರ್ಯಗಳು

2.5 ಸ್ಥಳೀಯ ಆಡಳಿತ

## 2. ಅಧ್ಯಯನಕ್ಕೊಳಪಡುವ ಕೊಳೆಗೇರಿಯ ಭೌಗೋಳಿಕ ವಿವರಗಳು

**2.1 ಹೊಸಪೇಟೆ ತಾಲ್ಲೂಕಿನ ನಕಾಶೆ :** ತಾಲ್ಲೂಕಿನ ನಕಾಶೆಯ ಚಿತ್ರಣ ಈ ಕೆಳಕಂಡಂತೆ ತೋರಿಸಲಾಗಿದೆ.






## 2.2 ಸ್ಲಂಗಳ ಭೌಗೋಳಿಕ ಹಿನ್ನೆಲೆ

ಹೊಸಪೇಟೆಯೂ ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಹೊಸಪೇಟೆಯು ತುಂಗಭದ್ರ ನದಿಯ ತೀರದಲ್ಲಿದ್ದು ಜಗತ್ ಪ್ರಸಿದ್ದಿ ವಿಜಯನಗರ ಸಾಮ್ರಾಜ್ಯ. ಹೊಸಪೇಟೆಯಿಂದ ಹಂಪೆ ಕೇವಲ 13 ಕಿ.ಮೀ. ದೂರದಲ್ಲಿದೆ. ಹಂಪೆ ಈ ಸ್ಥಳ ವಿಶ್ವ ಪರಂಪರೆಯ ತಾಣಗಳಲ್ಲಿ ಒಂದಾಗಿದೆ. ಇಲ್ಲಿ ತುಂಗಭದ್ರ ನದಿಯ ಮೇಲೆ 20 ನೇ ಶತಮಾನದಲ್ಲಿ ತುಂಗಭದ್ರ ಆಣೆಕಟ್ಟು ಕಟ್ಟಲಾಗಿದೆ. ಬೊಮ್ಮಘಟ್ಟ ಇಲ್ಲಿಯ ಶ್ರೀ ಹುಲಿಕುಂಟೆರಾಯ ದೇವಸ್ಥಾನವು ಪ್ರಸಿದ್ಧ, ಈ ಒಂದು ಸ್ಥಳದಲ್ಲಿ ಪ್ರತಿ ವರ್ಷ ಪಾಲ್ಗುಣ ಶುಕ್ರದ ದಶಮಿಯೆಂದು ರಥೋತ್ಸವ ಇರುತ್ತದೆ. 1520 ರಲ್ಲೇ ದಕ್ಷಿಣ ಭಾರತದ ಅತಿಮುಖ್ಯ ನಗರಗಳಲ್ಲೊಂದೆನಿಸಿಕೊಂಡಿದ್ದ ಹೊಸಪೇಟೆ ಇಂದು ಕರ್ನಾಟಕದ ಅತಿ ಸಾಮಾನ್ಯ ನಗರಗಳಲ್ಲೊಂದಾಗಿದೆ. ಹೊಸ ಮಾರುಕಟ್ಟೆಯ ಹೆಸರಿನಲ್ಲಿ ಅಂದು ವಿಜಯನಗದ ದೊರೆಗಳಿಂದ ಉದಯಗೊಂಡ ಹೊಸಪೇಟೆ ಇಂದು ವಾಣಿಜ್ಯ ಕ್ಷೇತ್ರದಲ್ಲಿ ತನ್ನ ಪ್ರಸ್ತುತತೆಯನ್ನು ಕಳೆದುಕೊಂಡಿದೆ.

ಹೊಸಪೇಟೆ ಕಬ್ಬಿಣದ ಅದುರಿನ ಬೀಡು. ಇದು ವಿಜಯನಗರ ಸಾಮ್ರಾಜ್ಯದ ಕೇಂದ್ರ ಸ್ಥಾನವೂ ಕೂಡ ಆಗಿತ್ತು. ರಾಷ್ಟ್ರೀಯ ಹೆದ್ದಾರಿ 13 ಹೊಸಪೇಟೆಯ ಬದಿಯಲ್ಲೇ ಹಾದು ಹೋಗುತ್ತದೆ. ಹಂಪಿಯ ಗತವೈಭವ ಇಂದು ಹೆಮ್ಮೆಯ ಮಾತುಗಳಷ್ಟೇ ಆಗಿ ಉಳಿದು ಕೊಂಡಿವೆ. ಇಂದಿನ ಹೊಸಪೇಟೆಯ ಜನಜೀವನ ನಿಜಕ್ಕೂ ಕರ್ನಾಟಕದ ಬೇರಾವ ನಗರಗಳಿಗಿಂತಲೂ ಉತ್ತಮವಾಗಿಲ್ಲ. ಹೊಸಪೇಟೆಯ ಜಿಲ್ಲಾ ಕೇಂದ್ರ ಬಳ್ಳಾರಿಗೆ 64 ಕಿ.ಮೀಟರ್ ದೂರದಲ್ಲಿಯೂ, ರಾಜಧಾನಿ ಬೆಂಗಳೂರಿಗೆ 336 ಕಿ.ಮೀ. ದೂರದಲ್ಲಿದೆ. ಈ ನಗರಕ್ಕೆ ರೈಲು ಮತ್ತು ಸಂಚಾರಗಳೆರಡೂ ಲಭ್ಯ. ಪ್ರವಾಸಿತಾಣವಾಗಿ ಜಗತ್ತಿನ ಜನರನ್ನು ಸೆಳೆಯುತ್ತಿರುವ ಹಂಪೆ ನಾಡಿನ ಹಿರಿಮೆಗಳಲ್ಲೊಂದು. ಹೊಸಪೇಟೆಯಲ್ಲಿ ಕರ್ನಾಟಕದಲ್ಲೇ ಅತಿ ಮುಖ್ಯವೆನಿಸುವ ತುಂಗಭದ್ರೆಯ ಅಣೆಕಟ್ಟು ಸಹ ಇದೆ.

ಈಗಿನ ಹೊಸಪೇಟೆ ನಗರದ ಬಹು ಮುಖ್ಯ ವಿಷಯವನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿತ್ತದೆ. ಹೊಸಪೇಟೆಯೆಂಬುದು ರೂಢಿಯಲ್ಲಿ ಬಳಕೆಗೆ ಬಂದ ಹೆಸರಾದರೆ, ಲಿಖಿತ ಶಾಸನ ಪುರಾವೆಗಳ ಪ್ರಕಾರ ಏನಿದ್ದಿತು. ಮತ್ತು ಎಷ್ಟು ಪ್ರಾಮುಖ್ಯತೆಯನ್ನು ಹೊಂದಿದ್ದಿತು, ಮತ್ತು ಯಾವ ಕಾಲದಿಂದ ಅಸ್ತಿತ್ವದಲ್ಲಿ ಬಂದಿರಬೇಕೆಂಬುದನ್ನು ತಿಳಿಯುವುದು ಸಮಂಜಸವಾಗುತ್ತದೆ. ಈಗಿನ ಹೊಸಪೇಟೆ ನಗರವು ವಿಜಯನಗರದ ಕಾಲದಲ್ಲಿ ಎಂದರೆ ಸುಮಾರು ನಾಲ್ಕನೂರು ವರ್ಷಗಳಿಗಿಂತಲೂ ಪೂರ್ವದಲ್ಲಿ (ಕ್ರಿ. ಶ. 1565ಕ್ಕೂ ಮೊದಲು) ಇದ್ದಂತೆ ಇಲ್ಲವಾದರೂ, ಅದು ಕಾಲಕಾಲಕ್ಕೆ ಬದಲಾದ ಪರಿಸ್ಥಿತಿಗಳಿಗನುಗುಣವಾಗಿ ಅನೇಕ ಮಾರ್ಪಾಟುಗಳಿಗೆ ಗುರಿಯಾದುದಾದಿಗ. ಆದುದರಿಂದ ಅದರ ಪೂರ್ವದ ವಿವರಣೆಗಳನ್ನು ಈಗ ಕೊಡುವುದು ಅಸಾಧ್ಯ. ಆದರೂ ಈಗ ಸಣ್ಣಕ್ಕಿ ವೀರಭದ್ರದೇವರ

ಗುಡಿಯ ಅವರಣದಲ್ಲಿ (ಸಹಕಾರಿ ಗೃಹನಿರ್ಮಾಣ ಸಮಿತಿಯ ಬಡಾವಣೆ) ಈಗಲೂ ಕಾಣಬರುವ ಒಂದು ಶಿಲಾಶಾಸನದ ಪ್ರಕಾರ, ಈ ಭಾಗವು ತಿರುಮಲದೇವಿ ಪಟ್ಟಣವೆಂದು ಪ್ರಸಿದ್ಧಿಯಾಗಿತ್ತು.

ಇದೇ ವಿಷಯವನ್ನು ಪುನಃ ಉಚ್ಚರಿಸುವ ಇನ್ನೊಂದು ಶಾಸನವು ಹೊಸಪೇಟೆಯ ವಾಲ್ಮೀಕಿ ಜನಾಂಗದವರ ಕೇರಿ ಭಾಗದಲ್ಲಿ ದೊರೆತಿದೆ. ಈ ಎರಡೂ ಶಾಸನಗಳೂ ಅನುಕ್ರಮವಾಗಿ ಗೌರೀಶ್ವರನೆಂಬ ದೇವರಿಗೆ ಮತ್ತು ತಿರುವೆಂಗಳನಾಥನೆಂಬ ದೇವರಿಗೆ ಕೆಲವು ದಾನಗಳನ್ನು ಕೊಡುವಾಗ ಹೊರಡಿಸಲಾಗಿದ್ದು ಅವುಗಳೆರಡೂ ತಿರುಮಾಲದೇವಿಯವರ ಪಟ್ಟಣವೆಂಬ ಹೆಸರನ್ನು ತಿಳಿಸುತ್ತವೆ. ನಮಗೆಲ್ಲ ತಿಳಿದಿರುವಂತೆ ಸಾಮಾನ್ಯವಾಗಿ ದಾನಶಾಸನಗಳನ್ನು ಸಂಬಂಧಿಸಿದ ಮತ್ತು ದಾನಪಡೆದ ದೇವಸ್ಥಾನಗಳ ಆವರಣದಲ್ಲಿ ಅಥವಾ ಪರಿಸರದಲ್ಲಿ ಸ್ಥಾಪಿಸಲಾಗುತ್ತಿತ್ತು. ಎಂದ ಬಳಿಕ ಈ ಭಾಗವು ವಿಜಯನಗರದ ಕಾಲದಲ್ಲಿ, ನಿಶ್ಚಿತವಾಗಿಯೂ ಈ ಶಾಸನಗಳನ್ನು ಹೊರಡಿಸಿದ ಕಾಲದಲ್ಲಿ ತಿರುಮಾಲದೇವಿ ಪಟ್ಟಣವೆಂದಾಯಿತು.

### ಪೌರಾಣಿಕ ಹಿನ್ನೆಲೆ

ಹೊಸಪೇಟೆಯ ಪರಿಸರವು, ಅದರಲ್ಲೂ ಹಂಪೆಯ ಸ್ಥಳವು ಪುರಾಣಗಳ ಕಾಲದಿಂದಲೂ ಜನವಸತಿ ಮತ್ತು ಧಾರ್ಮಿಕ ಸಂಸ್ಥೆಗಳಿಂದ ಕೂಡಿದ್ದು, ಪ್ರಜೆಗಳ ವಿವಿಧ ಕಾರ್ಯ ಕ್ಷೇತ್ರವಾಗಿದ್ದಿತೆಂಬ ವಿಷಯದಲ್ಲಿ ಸಂದೇಹವೇ ಇಲ್ಲ. ಬಹುಶಃ ವಿಜಯನಗರದ ಸ್ಥಾಪನೆಯ ಕಾಲದಿಂದೀಚೆಗೆ ಅದು ಅಸ್ತಿತ್ವದಲ್ಲಿ ಬಂತು ಮತ್ತು ಕಾಲಾಂತರದಲ್ಲಿ ರಾಜಕೀಯ ವಾತಾವರಣಕ್ಕನುಗುಣವಾಗಿ ಹಿಗ್ಗಿ ಕುಗ್ಗಿ ಆನಂತರ ಈಗ ನಾವು ಆಧಾರಗಳ ಸಹಿತ ಇಲ್ಲಿ ವಿವೇಚಿಸಲಾಗಿದೆ.

ಪುರಾತನ ಕಾಲದಿಂದಲೂ, ಜನವಸತಿಯು ಮುಖ್ಯವಾಗಿ ಮನುಷ್ಯನಿಗೆ ಕುಡಿಯಲು ಬೇಕಾದ ನೀರು ಸದಾಕಾಲದಲ್ಲಿ ಲಭಿಸುವಂತಿದ್ದೆಡೆಗಳಲ್ಲಿ ಆರಂಭವಾಗಿ. ನಂತರ ಊರ್ಜಿತವಾಗುತ್ತಿತ್ತು. ನೀರಿನ ಲಭ್ಯತೆಯ ನಂತರ ಆಹಾರದ ದೊರೆಯುವಿಕೆಯನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತಿತ್ತು. ಆ ತರುವಾಯ ಇತರ ಅನುಕೂಲತೆಗಳು, ಎಂದರೆ ಆರೋಗ್ಯಕರವಾದ ಹವಾಮಾನ. ವೈರಿಗಳಿಂದ ರಕ್ಷಣೆ, ಸಾರಿಗೆ ಸೌಲಭ್ಯಗಳು ಮುಂತಾಗಿ ನಿರ್ಣಯಗೊಳಗಳುತ್ತಿದ್ದವು.

ಈಗಿನ ಹೊಸಪೇಟೆ ನಗರದ ನಿವೇಶನದಲ್ಲಿ ಇಂಥ ಯಾವ ಅನುಕೂಲತೆಗಳೂ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗಿಂತ ಮೊದಲು ಇದ್ದಿರಲಾರವು. ಈ ನಿವೇಶನದಲ್ಲಿನ ಭೌಗೋಳಿಕ ವೈಶಿಷ್ಟ್ಯಗಳನ್ನು ಅವಲೋಕಿಸಿದ್ದಲ್ಲಿ ಇದು ವೇದ್ಯವಾಗುತ್ತದೆ. ಈಗ ಹೊಸಪೇಟೆ ನಗರದ ಮೂಲಕ ಹರಿದು ಹೋಗುವ ಕಾಲುವೆಗಳೆಲ್ಲಾ ವಿಜಯನಗರದ ಅರಸರ ಕಾಲದಲ್ಲಿ ನಿರ್ಮಿಸಲಾದವುಗಳು ಈ ನಗರದ ಪಶ್ಚಿಮಕ್ಕೆ ಇರುವ ಬೃಹತ್ ಪ್ರಮಾಣದ ರಾಯರ ಕೆರೆಯೂ ಸಹ ವಿಜಯನಗರದ ಅರಸರ ಕಾಲದಲ್ಲಿ

ನಿರ್ಮಾಣಗೊಂಡುದುದಾಗಿದೆ. ಇದರ ಸುತ್ತಲಿನ ಭೂಮಿಯೂ ಸಹ ಕೆಂಪು ಭೂಮಿಯಾಗಿದ್ದು ಅಷ್ಟೊಂದು ಫಲವತ್ತಾದುದಲ್ಲ. ಈಗ ಕಾಣಬರುವ ಮಾಗಾಣಿ ಭೂಮಿಯೂ ಸಹ ಸಂಪೂರ್ಣವಾಗಿ ಫಲವತ್ತಾಗಿದ್ದುದಾಗಿರದೇ ವರುವರುಷ ಇಲ್ಲಿಯ ನದಿಕಾಲುವೆಗಳಿಂದ ಬಂದ ಹೊರಟು ಮಣ್ಣಿನಿಂದಾಗಿ ಮತ್ತಿತರ ಕಾರಣಗಳಿಂದಾಗಿ ಫಲವತ್ತಾಗಿದ್ದು ಕಪ್ಪು ಭೂಮಿಯಂತೆ ಕಾಣುತ್ತಿರಲು ಸಾಕು.

ಶ್ರೀ ಹೊಸಪೇಟೆ ಎಂಬ ನಗರವು ಅನೇಕ ಪವಿತ್ರ ಸನ್ನಿವೇಶಗಳಿಂದ ಅಲಂಕೃತವಾಗಿದೆ. ಇದು ತನ್ನ ಪೂರ್ವ ದಿಕ್ಕಿನಲ್ಲಿ ಶ್ರೀ ಮದ್ವಿಜಯನಗರದ ಮಹಾರಾಜ್ಯಾವಶೇಷಯುಕ್ತವಾದ ಪುರಾಣಪ್ರಸಿದ್ಧಿ ಶ್ರೀ ಪಂಪಾಕ್ಷೇತ್ರದಿಂದ ಏಳು ಮೈಲು ಅಂತರದಲ್ಲಿಯೂ, ಪಶ್ಚಿಮಕ್ಕೆ ನೂತನ ತುಂಗಭದ್ರಾ ಜಲಾಶಯದಿಂದ ಮೂರು ಮೈಲು ಅಂತರದಲ್ಲಿಯೂ, ಉತ್ತರಕ್ಕೆ ಶ್ರೀ ತುಂಗಭದ್ರಾ ನದಿ ಮತ್ತು ಶ್ರೀ ಹೊಸೂರಮ್ಮ – ಹುಲಿಗೆಮ್ಮ ಎಂಬ ಪುರಾಣ ಪ್ರಸಿದ್ಧ ದುರ್ಗಾ ಕ್ಷೇತ್ರಗಳಿಂದ ನಾಲ್ಕು ಮೈಲು ಅಂತರದಲ್ಲಿಯೂ ಇದ್ದು ಅನೇಕಾನೇಕ ಜ್ಞಾನಾಢ್ಯ, ಧನಾಢ್ಯ, ಬಲಾರಾಯನೆಂಬ ಪ್ರಾಣದೇವರ ದೇವಸ್ಥಾನದಿಂದ ಪರಿಶೋಭಿಸುತ್ತಿದೆ.

ಈ ಹೊಸಪೇಟೆ ಎಂಬ ಗ್ರಾಮವು ಪೂರ್ವಕಾಲದಲ್ಲಿ ಶ್ರೀ ವಿಜಯನಗರ' ರಾಜ್ಯರಕ್ಷಾದುರ್ಗವಾಗಿದ್ದಿತು. ಇದು ಒಂದು ಚಿಕ್ಕ ಹಳ್ಳಿಯಾಗಿದ್ದರೂ ಭದ್ರತರವಾದ ಕೋಟೆಕೊತ್ತಲಗಳಿಂದ ಸುರಕ್ಷಿತವಾಗಿತ್ತು. ಈ ಗ್ರಾಮವನ್ನು **"ಹೊಸದುರ್ಗ"** ವೆಂತಲೂ **"ಹೊಸವೀಡು"** ಎಂತಲೂ ಕರೆಯಲಾಗಿದೆ.

## 2.3 ಸ್ಲಂಗಳಲ್ಲಿನ ವಿವಿಧ ಸಮುದಾಯಗಳು ಮತ್ತು ಜನಸಂಖ್ಯೆ

ಬಳ್ಳಾರಿ ಜಿಲ್ಲೆಯ ಪ್ರಮುಖ ನಗರಗಳಲ್ಲಿ ಹೊಸಪೇಟೆ ಬಹಳ ದೊಡ್ಡ ನಗರ. ಇದು ಹೊಸಪೇಟೆ ತಾಲ್ಲೂಕು ಕೇಂದ್ರವೂ ಆಗಿದ್ದು. ಎಲ್ಲಾ ಇಲಾಖೆಗಳ ಕೇಂದ್ರ ಸ್ಥಾನವೂ ಹೌದು. 1964 ರ ಕರ್ನಾಟಕ ಮುನಿಸಿಪಾಲಿಟಿ ಕಾಯಿದೆಯ ಅನ್ವಯ ನಗರಸಭೆ ಆಡಳಿತ ನಡೆಸುತ್ತಿದೆ. ಇಲ್ಲಿ ವಾಸಿಸುವ ಒಟ್ಟು ಜನಸಂಖ್ಯೆಯ ಶೇಕಡ 50 ಭಾಗ ಸ್ಲಂಗಳಲ್ಲಿ ವಾಸಿಸುತ್ತಾರೆ.

ಇಂದು ಹೊಸಪೇಟೆ ತಾಲ್ಲೂಕು ಕೇಂದ್ರವಾಗಿದ್ದರೂ ಬೇರೆ ಜಿಲ್ಲಾ ಕೇಂದ್ರಗಳಿಗೆ ಹೋಲಿಸಿದರೆ ಇದರ ವ್ಯಾಪ್ತಿ ಗಣನೀಯ ಪ್ರಮಾಣದಲ್ಲಿ ವಿಸ್ತಾರವಾಗಿದೆ. 1971 ರ ಸುಮಾರಿಗೆ ಈ ನಗರದಲ್ಲಿ ಪ್ರತಿ ಚದುರ' ಕಿಲೋ ಮೀಟರ್ ವ್ಯಾಪ್ತಿಯಲ್ಲಿ 4,829 ರಷ್ಟು ಜನರು ವಾಸಿಸುತ್ತಿದ್ದರು. 1991 ರ ಸುಮಾರಿಗೆ ಪ್ರತಿ ಚದುರ ಕಿಲೋ ಮೀಟರ್‌ನಲ್ಲಿ 2648 ಜನ ವಾಸಿಸುತ್ತಿದ್ದಾರೆ. ಸರಿಸುಮಾರು ಅರ್ಧಕ್ಕರ್ಧ ಜನರ ಜನದಟ್ಟಣೆ ಕಳೆದ ಇಪ್ಪತ್ತು ವರ್ಷಗಳಲ್ಲಿ ಕಡಿಮೆಯಾಗಿದೆ. 1971 ರ ಸುಮಾರಿನಲ್ಲಿ ಕೇವಲ 13.5 ಚದುರ ಕಿಲೋ ಮೀಟರ್ ನಷ್ಟು ವ್ಯಾಪ್ತಿಯನ್ನು ಹೊಂದಿದ್ದ ಹೊಸಪೇಟೆ, 1991 ರ ಹೊತ್ತಿಗೆ 50.9 ಚದುರ

ಕಿಲೋ ಮೀಟರ್ ಗಳ ವ್ಯಾಪ್ತಿಗೆ ತನ್ನನ್ನು ತಾನು ವಿಸ್ತರಿಸಿ ಕೊಂಡಿದೆ. ಸದ್ಯ 2001 ರಲ್ಲಿ ಇಲ್ಲಿಯ ಜನದಟ್ಟಣೆಯ ಗಾತ್ರ ಪ್ರತಿ ಚದುರ ಕಿಲೋ ಮೀಟರ್ 4322 ರಷ್ಟು ಆಗಿದೆ. 2011 ರಲ್ಲಿ ಇಲ್ಲಿನ ಜನದಟ್ಟಣೆಯ ಗಾತ್ರ ಪ್ರತಿ ಚದುರ ಕಿಲೋ ಮೀಟರ್‌ಗೆ 4148 ರಷ್ಟು ಆಗಿದೆ. ಹೊಸಪೇಟೆ'ಯಲ್ಲಿನ ಜನಸಂಖ್ಯೆ ವರ್ಷದಿಂದ ವರ್ಷಕ್ಕೆ ಬದಲಾಗುತ್ತ ಬಂದಿದೆ.

**ಕೋಷ್ಟಕ 2.1**

| Caste wise Male and Female Population 2011 Hospet | | | | | |
|---|---|---|---|---|---|
| | **Total** | **General** | **Schedule Caste** | **Schedule Tribe** | **Child** |
| **Total** | 2,06,167 | 1,43,545 | 34,504 | 28,118 | 27,754 |
| **Male** | 1,02,668 | 72,139 | 16,941 | 13,588 | 24,102 |
| **Female** | 1,03,499 | 71,406 | 17,563 | 14,530 | 13,652 |

ಆಧಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ




ಆಧಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ

ಈ ಮೇಲ್ಕಂಡ ಕೊಷ್ಟಕಕ್ಕೆ ಸಂಬಂಧಿಸಿದಂತೆ ಹೊಸಪೇಟೆ ನಗರದಲ್ಲಿ ವಾಸಿಸುವ ಎಲ್ಲ ಸಮುದಾಯದ ಜನಸಂಖ್ಯೆಯನ್ನು ಈ ಕೊಷ್ಟಕದ ಮೂಲಕ ತೋರಿಸಲಾಗಿದೆ. 2011 ರ ಜನಗಣತಿಯ

ಪ್ರಕಾರ ಪುರುಷ ಸಂಖ್ಯೆ 1,02,668 ಮತ್ತು ಮಹಿಳೆಯರ ಸಂಖ್ಯೆ 1,03,499 ಒಟ್ಟು ಹೊಸಪೇಟೆ ನಗರದಲ್ಲಿ 2,06,167 ಜನಸಂಖ್ಯೆಯನ್ನು ಹೊಂದಿದೆ.

## ಕೊಷ್ಟಕ 2.2

| Slum Wise Male and Female Population | | | | |
| --- | --- | --- | --- | --- |
| | **Total** | **Premnagara** | **Shirasinakallu** | **Kariganoor (Valmiki nagara)** |
| **Total** | 4321 | 520 | 2928 | 873 |
| **Male** | 2159 | 267 | 1461 | 431 |
| **Female** | 2162 | 253 | 1467 | 442 |

ಆಧಾರ : ಕ್ಷೇತ್ರಕಾರ್ಯದ ಮೂಲಕ ಸ್ಲಂಗಳಿಂದ ಸಂಗ್ರಹಿಸಿದ ಮಾಹಿತಿ.




ಆಧಾರ : ಕ್ಷೇತ್ರಕಾರ್ಯದ ಮೂಲಕ ಸ್ಲಂಗಳಿಂದ ಸಂಗ್ರಹಿಸಿದ ಮಾಹಿತಿ.

ಈ ಮೇಲ್ಕಂಡ ಕೊಷ್ಟಕಕ್ಕೆ ಸಂಬಂಧಿಸಿದಂತೆ ಅಧ್ಯಯನಕ್ಕೆ ಆಯ್ದುಕೊಂಡ ಮೂರು ಸ್ಲಂಗಳಲ್ಲಿ ಒಟ್ಟು ಜನಸಂಖ್ಯೆ 4321 ಅದರಲ್ಲಿ ಪುರುಷರ ಸಂಖ್ಯೆ 2159 ಹಾಗೂ ಮಹಿಳೆಯರ ಸಂಖ್ಯೆ 2162 ಜನ ಇದ್ದರೆ. ಇದರಲ್ಲಿ ಪುರುಷರಿಗಿಂತ ಮಹಿಳೆಯರ ಸಂಖ್ಯೆ ಹೆಚ್ಚಿದೆ ಎಂದು ಹೇಳಲಾಗಿದೆ.

ಸ್ಲಂಗಳಲ್ಲಿ ಪ್ರತಿಯೊಂದು ಸಮುದಾಯವು ಪ್ರತ್ಯೇಕವಾದ ಭಾಷೆ, ಉಪಭಾಷೆ, ವಿಶಿಷ್ಟವಾದ ಜೀವನಕ್ರಮ, ಇತರರಿಗಿಂತ ಭಿನ್ನವಾದ ಅಂತರಿಕ ವ್ಯವಸ್ಥೆ, ಪ್ರತ್ಯೇಕವಾದ ಸಾಮಾಜಿಕ ವ್ಯವಸ್ಥೆ ತಮ್ಮದೇ ಆದ ಕೌಟುಂಬಿಕ ವ್ಯವಸ್ಥೆ, ಮದುವೆ ಹುಟ್ಟು ಸಾವು ಇವುಗಳ ಜೊತೆಗೆ ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದರ ಜೊತೆಗೆ ಸಾಹಿತ್ಯ, ಕಲೆ, ವೇಷ ಭೂಷಣಗಳಲ್ಲಿ ವಿಭಿನ್ನತೆಯನ್ನು ಕಾಣಬಹುದು. ಹೀಗೆ ಸಾಂಸ್ಕೃತಿಕ ಹತ್ತು ಹಲವು ಅನನ್ಯತೆಗಳನ್ನು ಬುಡಕಟ್ಟುಗಳಲ್ಲಿ ಕಾಣಬಹುದು. ಈ ಅನ್ಯನತೆಗಳು ಸಾಂಪ್ರದಾಯಿಕ ಕುರುಹುಗಳಾಗಿದ್ದು ಇಂತಹ ಅನನ್ಯತೆಯನ್ನು ಆಧುನಿಕ ಶಿಸ್ತುಗಳಲ್ಲಿ ಅಧ್ಯಯನ ಮಾಡಬೇಕಾದ ಅಗತ್ಯವಿದೆ. ಈ ಕುರಿತಂತೆ ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯನಂತರದಲ್ಲಿ ಹಲವು ಸಂಶೋಧನೆಗಳು ನಡೆದಿದ್ದು, ಹೊಸ ಹೊಸ ವಿಚಾರಗಳು ಶೋಧನೆಗೊಂಡಿದೆ. ಈ ಸ್ಲಂಗಳನ್ನು ವಿಭಿನ್ನ ರೀತಿಯಲ್ಲಿ ಅಧ್ಯಯನ ಮಾಡುವ ಪ್ರಸ್ತುತ ಅಧ್ಯಯನವಾಗಿದೆ.

ಯಾವುದೇ ಸಮುದಾಯದ' ಅಧ್ಯಯನದ ಮೂಲ ಉದ್ದೇಶವೆಂದರೆ ಆ ಬುಡಕಟ್ಟಿನ ಸಂಸ್ಕೃತಿ ಮೂಲ ಸ್ವರೂಪ (ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ) ವಾಗಿ ಕಂಡುಕೊಳ್ಳುವುದು ಹೀಗಾಗಿ ಸ್ಲಂಗಳ ಅಧ್ಯಯನವು ಸಮಾಜದ ಬಗೆಗಿನ ಅಂತರ ದೃಷ್ಟಿಗೆ ಹೊಸ ಅರಿವನ್ನು ಒದಗಿಸುತ್ತದೆ. ಹಾಗಾಗಿ ಸ್ಲಂಗಳನ್ನು ಸೂಕ್ಷ್ಮ ಅಧ್ಯಯನಗಳ ಮುಖಾಂತರ ಅಭ್ಯಸಿಸುವುದು ಅನಿವಾರ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಕುಟುಂಬ, ಜಾತಿ, ಕುಲ, ಜನಾಂಗ, ಸಮುದಾಯಗಳ ನೆಲೆಗಳಲ್ಲಿ ಅಭ್ಯಸಿಸಲಾಗಿದೆ. ಜೊತೆಗೆ ಇವುಗಳ ರಕ್ತ ಸಂಬಂಧ, ಪ್ರಾವಿತ್ರ್ಯವೆ. ನಂಬಿಕೆ ವಿಧಿನಿಷೇಧ ಆಚರಣೆ ಮತ್ತು ಸಂಪ್ರದಾಯಗಳ ಮೂಲಕವೂ ತಿಳಿಯಲಾಗಿದೆ. ಅಂತೆಯೇ ಅನೇಕ ಬುಡಕಟ್ಟುಗಳ ಸಮುದಾಯಗಳ ನಡುವೆಯು ಅನನ್ಯತೆಯನ್ನು ಹೊಂದಿರುವ ಸ್ಲಂಗಳನ್ನು ಸಹ ಅಧ್ಯಯನಕ್ಕೆ ಒಳಪಡಿಸುವ ಅವಶ್ಯಕತೆ ಇದೆ.

**ಕೊಷ್ಟಕ 2.3**

**Religion wise population 2011 - Hospet**

| | Total | Hindu | Muslim | Christian | Sikh | Buddhist | Jain | Others | Not Stated |
|---|---|---|---|---|---|---|---|---|---|
| otal | 2,06,167, | 1,49,304 | 51,630 | 2,630 | 207 | 54 | 2,159 | 4 | 179 |
| ale | 1,02,668 | 74,126 | 25,937 | 1,255 | 110 | 24 | 1,124 | 1 | 91 |
| male | 1,03,499 | 75,126 | 25,693 | 1,375 | 97 | 30 | 1,035 | 3 | 88 |

ಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ




ಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ

ಈ ಮೇಲ್ಕಂಡ ಕೊಷ್ಟಕವು ಮತ ಧರ್ಮಗಳ ಆಧಾರದ ಮೇಲೆ ರಚಿತಗೊಂಡಿದೆ. ಹೊಸಪೇಟೆ ನಗರದಲ್ಲಿ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಸಿಖ್, ಬೌದ್ದ ಧರ್ಮ, ಜೈನ ಧರ್ಮಗಳ ಮತ್ತು ಇತರೆ ಜನಾಂಗದವರು ಎಷ್ಟು ಜನ ಇದರೆ ಎಂಬುದನ್ನು ನಿರ್ಧಾರಿಸಲಾಗಿದೆ.

**ಕೊಷ್ಟಕ 2.4**

| Religion Slum wise population - Hospet | | | | | | | |
|---|---|---|---|---|---|---|---|
| | Total | Hindu | Muslim | Christian | Sikh | Buddhist | Others |
| **Total** | 4321 | 2850 | 1,426 | 25 | 9 | 7 | 4 |
| **Male** | 2159 | 1,500 | 639 | 10 | 5 | 4 | 1 |
| **Female** | 2162 | 1,350 | 787 | 15 | 4 | 3 | 3 |

ಆಧಾರ : ಕ್ಷೇತ್ರಕಾರ್ಯದ ಮೂಲಕ ಸ್ಲಂಗಳಿಂದ ಸಂಗ್ರಹಿಸಿದ ಮಾಹಿತಿ.




ಆಧಾರ : ಕ್ಷೇತ್ರಕಾರ್ಯದ ಮೂಲಕ ಸ್ಲಂಗಳಿಂದ ಸಂಗ್ರಹಿಸಿದ ಮಾಹಿತಿ.

ಈ ಮೇಲ್ಕಂಡ ಕೋಷ್ಟಕವು ಮತ ಧರ್ಮಗಳ ಆಧಾರದ ಮೇಲೆ ರಚಿತಗೊಂಡಿದೆ. ಹೊಸಪೇಟೆ ನಗರದಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಸ್ಲಂಗಳಲ್ಲಿ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಸಿಖ್, ಬೌದ್ಧ ಧರ್ಮ, ಜೈನ ಧರ್ಮಗಳ ಮತ್ತು ಇತರೆ ಜನಾಂಗದವರು ಎಷ್ಟು ಜನ ಇವರೆ ಎಂಬುದನ್ನು ನಿರ್ಧಾರಿಸಲಾಗಿದೆ.

## 2.4 ಮೂಲಭೂತ ಸೌಕರ್ಯಗಳು

ಸ್ಲಂ ನಿವಾಸಿಗಳ ಮೂಲಭೂತ ಸೌಲಭ್ಯಗಳು. ಇಲ್ಲಿ ಇರುವತಂಹ ನಿವಾಸಿಗರು ಕೆಲವೊಂದು ಸೌಲಭ್ಯಗಳನ್ನು ಸ್ವಲ್ಪ ಪ್ರಮಾಣದಲ್ಲಿ ಅನುಭವಿಸುತ್ತಿದ್ದಾರೆ ಇನ್ನು ಕೆಲವು ಸೌಲಭ್ಯಗಳ ಮಾಹಿತಿಯೇ ಇಲ್ಲ. ಸ್ಲಂ ನಿವಾಸಿಗಳ ಮೂಲಭೂತ ಸೌಲಭ್ಯಗಳನ್ನು ಅಥವಾ ಸೌಕರ್ಯಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

### 1. ನೀರಿನ ವ್ಯವಸ್ಥೆ

ಇಲ್ಲಿಯ ಒಟ್ಟು ಸ್ಲಂಗಳಲ್ಲಿ ಶೇಕಡ 63 ರಷ್ಟು ಪ್ರದೇಶಕ್ಕೆ ಕುಡಿಯುವ ನೀರಿನ ಸೌಲಭ್ಯವಿದೆ. ಆದರೆ ನೀರಿನ ಪ್ರಮಾಣದಲ್ಲಿ ವ್ಯತ್ಯಾಸವಿದೆ. ಸಾಮಾನ್ಯ ಬಡಾವಣೆಗಳ ನಾಗರಿಕರಿಗೆ ದೊರಕುತ್ತಿರುವುದು ಪ್ರತಿ ದಿನ 25 ಲೀಟರ್ ಗಳಷ್ಟು ನೀರು. ಪ್ರತಿ ನಾಗರೀಕರಿಗೆ ಅಗತ್ಯವಿರುವುದು 120 ಲೀಟರ್ ನೀರು. ಅಂದರೆ ಇದರಲ್ಲಿ ಸ್ಲಂ ಜನರ ಪಾಲು ತೀರ ನಿಕೃಷ್ಟವಾಗಿದೆ. ಸಾರ್ವಜನಿಕ ಭೂ ಒಡೆತನದ 31

ಸ್ಲಂಗಳಲ್ಲಿ ಖಾಸಗಿ ಭೂ ಒಡೆತನದ 6 ಸ್ಲಂಗಳಲ್ಲಿ ನೀರಿನ ಸರಬರಾಜು ಇದೆ. ಇಲ್ಲಿ ಸ್ಲಂಗಳಲ್ಲಿ ಶೇಕಡ 37 ರಷ್ಟು ಸ್ಲಂ ಪ್ರದೇಶದಲ್ಲಿ ಕುಡಿಯುವ ನೀರಿನ ಅಭಾವ ಎದ್ದು ಕಾಣಿಸುತ್ತಿದೆ. ಅನೇಕ ಸ್ಲಂಗಳಲ್ಲಿ ಕುಡಿಯುವ ನೀರಿನ ಪೂರೈಕೆ ನಿಜಕ್ಕೂ ಶೋಚನೀಯವಾಗಿದೆ. ಕುಡಿಯುವ ನೀರಿಗಾಗಿ 3.31 ಲಕ್ಷದ ಯೋಜನೆಯನ್ನು ಆಯೋಜಿಸಲಾಗಿದೆ. ಆದರೆ ಇದು ಯೋಜನೆ ಮಟ್ಟದಲ್ಲೇ ಉಳಿದು ಬಿಡುವ ಅಪಾಯವಿದೆ.

**2. ಶೌಚಾಲಯ ವ್ಯವಸ್ಥೆ**

ಇಲ್ಲಿಯ 59 ಸ್ಲಂಗಳಲ್ಲಿ ಕೇವಲ 17 ಸ್ಲಂ ಗಳಿಗೆ ಮಾತ್ರ ಸಾಮೂಹಿಕ ಶೌಚಾಯಲದ ವ್ಯವಸ್ಥೆಯಿದೆ. ಉಳಿದಂತೆ 42 ಸ್ಲಂ ಗಳಲ್ಲಿ ಶೌಚಾಯಲದ ವ್ಯವಸ್ಥೆ ಸರಿಯಾಗಿ ಇರುವುದಿಲ್ಲ. ಸಾರ್ವಜನಿಕ ಭೂ ಒಡೆತನದ 16 ಸ್ಲಂಗಳಲ್ಲಿ ಖಾಸಗಿ ಭೂ ಒಡೆತನದ 1 ಸ್ಲಂ ನಲ್ಲಿ ಮಾತ್ರ ಶೌಚಾಯಲ ವ್ಯವಸ್ಥೆಯಿದೆ. ಶೌಚಾಲಯದ ಸೌಲಭ್ಯದ ಕೊರತೆಯಿಂದ ಪ್ರತಿನಿತ್ಯ ಇಲ್ಲಿ 60 ಸಾವಿರಕ್ಕೂ ಅಧಿಕ ಸ್ಲಂ ಜನರು ಬವಣೆಪಡುತ್ತಿದ್ದಾರೆ.

ಶೌಚಾಲಯಗಳು ಇಲ್ಲದಿರುವುದು ಸ್ಲಂ ಜನರನ್ನು ಕಾಡುತ್ತಿರುವ ಅತಿ ದೊಡ್ಡ ಸಮಸ್ಯೆ. ಇಲ್ಲಿಯ ಬಹುತೇಕ ಸ್ಲಂಗಳಿಗೆ ಸಾಮುದಾಯಿಕ ಶೌಚಾಲಯ ನಿರ್ಮಿಸಿಕೊಡುವಲ್ಲೂ ನಮ್ಮ ವ್ಯವಸ್ಥೆ ಸೋತ್ತಿದೆ. ಕೇವಲ 16 ಸ್ಲಂಗಳಲ್ಲಿ ಮಾತ್ರ ಸಾಮೂಹಿಕ ಶೌಚಾಲಯ ವ್ಯವಸ್ಥೆಯಿದ್ದು, ಉಳಿದ 42 ಸ್ಲಂಗಳ ಜನರು ಬಹಿರ್ದೇಸೆಗಾಗಿ ಕಿ.ಮೀ. ಗಟ್ಟಲೇ ಅಲೆಯಬೇಕಾಗಿ ಬಂದಿರುವುದರಿಂದ ವೃದ್ಧರು, ಹೆಣ್ಣುಮಕ್ಕಳ ಶೌಚಲಯ ವ್ಯವಸ್ಥೆ ನಿಜಕ್ಕೂ ಕರಳು ಕತ್ತರಿಸುವಂತಿದೆ. ಸರಿಸುಮಾರು 60,000 ಕ್ಕೂ ಅಧಿಕ ಸ್ಲಂ ಜನ ಇಲ್ಲಿ ಅನಿಶ್ಚಿತ ಅವಧಿಯ ಬಹಿರ್ದೇಸೆಯ ಪದ್ದತಿಯನ್ನು ಅನುಭವಿಸುತ್ತಿದ್ದಾರೆ.

ಸರಿಸುಮಾರು ಶೇಕಡ 16 ರಷ್ಟು ಜನ ಇದೊಂದೇ ಕಾರಣದಿಂದ ಅನಾರೋಗ್ಯ ಪೀಡಿತರಾಗಿದ್ದಾರೆ. ಇವರಿಗೆ ಹೊಟ್ಟೆ ಹಸಿವಿಗೆ ಊಟ ಹಡುಕುವುದಕ್ಕಿಂತ ಅತಿ ದೊಡ್ಡ ಸಮಸ್ಯೆ ಶೌಚಾಲಯದ್ದು. ನಗರಾಡಳಿತವು ಕನಿಷ್ಠ ವೆಚ್ಚದಲ್ಲಿ ವ್ಯವಸ್ಥೆಗೊಳಿಸಬಹುದಾದ ಸ್ಲಂ ಜನರ ಸಾಮೂಹಿಕ ಶೌಚಾಲಯವನ್ನು ಇಲ್ಲಿಯ ತನಕ ಅತಿ ಮುಖ್ಯ ಸಮಸ್ಯೆಯೆಂದು ಪರಿಗಣಿಸಿಯೇ ಇಲ್ಲ. ಪ್ರತಿ ಸ್ಲಂನಲ್ಲೂ 5800 ರೂ ಗಳ ಶೌಚಾಲಯ ವ್ಯವಸ್ಥೆಯ ಯೋಜನಾ ಶಿಫಾರಸ್ಸನ್ನು ಮಾಡಲಾಗಿದೆ. ಕಳೆದ ಅನೇಕ ವರ್ಷಗಳಿಂದ ಅತ್ತಿತ್ತ ಅಲ್ಲಾಡದೇ ಆ ಹಂತದಲ್ಲೆ ಉಳಿದಿದೆ.

**3. ಚರಂಡಿ ವ್ಯವಸ್ಯೆ :**

ಈ ಸ್ಲಂಗಳಲ್ಲಿ ಚರಂಡಿಗಳನ್ನು ವ್ಯವಸ್ಥೆಗೊಳಿಸುವುದಿರಲಿ, ಇಲ್ಲಿಯ ವರೆಗೂ ಬೇರೆಯಾವ ಸ್ಲಂಗಳಿಗೆ ಚರಂಡಿಯಿಲ್ಲ, ಚರಂಡಿ ನಿರ್ಮಾಣಕ್ಕೆ ಎಷ್ಟು ಹಣ ಬೇಕಾಗುತ್ತದೆ. ಚರಂಡಿಯ ನಿರ್ಮಾಣ ಹೇಗಿರಬೇಕು? ಎನ್ನುವ ಪ್ರಾಥಮಿಕ ಮಾಹಿತಿಗಳಾಗಲೀ, ಯೋಜನೆಯಾಗಲೀ ಸ್ಥಳೀಯ ನಗರಾಡಳಿತದ

ಬಳಿ ಇಲ್ಲ. ಚರಂಡಿ ನಿರ್ಮಾಣದ ಕನಸು ಕಾಣುತ್ತಿರುವ ಇಲ್ಲಿಯ ಸ್ಲಂ ಜನರು ವರ್ಷದ ಆರು ತಿಂಗಳಲ್ಲಿ ನಿಜಕ್ಕೂ ನರಕ ಸದೃಶ ಬದುಕನ್ನು ಬಾಳುತ್ತಿದ್ದಾರೆ.

ಇಲ್ಲಿ ಕೇವಲ 4 ಸ್ಲಂ ಪ್ರದೇಶಗಳು ಮಾತ್ರ ಒಳಚರಂಡಿ ವ್ಯವಸ್ಥೆಯನ್ನು ಹೊಂದಿದೆ. ಉಳಿದಂತೆ 32 ಸ್ಲಂಗಳಲ್ಲಿ ಯಾವುದೇ ರೀತಿಯ ಒಳಚರಂಡಿಗಳು ಇಲ್ಲ. ಇನ್ನುಳಿದ ಸ್ಲಂಗಳಲ್ಲಿ ಭಾಗಶಃ ಒಳಚರಂಡಿ ವ್ಯವಸ್ಥೆ ಮಾತ್ರ ಇದೆ. ಸಾರ್ವಜನಿಕ ಭೂ ಒಡೆತನದ ಒಟ್ಟು ಸ್ಲಂಗಳಲ್ಲಿ ಅರ್ಧದಷ್ಟು ಸ್ಲಂಗಳಿಗೆ ಒಳಚರಂಡಿ ವ್ಯವಸ್ಥೆಯಿಲ್ಲ. ಖಾಸಗಿ ಭೂ ಒಡೆತನದ ಸ್ಲಂಗಳಲ್ಲಿ ಶೇಕಡ 52 ರಷ್ಟು ಪ್ರದೇಶಕ್ಕೆ ಒಳಚರಂಡಿ ಇಲ್ಲ.

ಒಳಚರಂಡಿ ವ್ಯವಸ್ಥೆಯ ಸ್ಥಿತಿ ಇದಾದರೆ ಚರಂಡಿ ವ್ಯವಸ್ಥೆಯ ಪರಿಸ್ಥಿತಿ ಮತ್ತಷ್ಟು ಚಿಂತಾಜನಕವಾಗಿದೆ. ಇಲ್ಲಿ ಕೇವಲ 3 ಸ್ಲಂಗಳಲ್ಲಿ ಮಾತ್ರ ಸಂಪೂರ್ಣವಾದ ಚರಂಡಿ ವ್ಯವಸ್ಥೆಯಿದೆ. ಉಳಿದ 30 ಸ್ಲಂಗಳಲ್ಲಿ ಪ್ರಯೋಜನಕ್ಕೆ ಬಾರದ ರೀತಿಯ ಭಾಗಶಃ ಚರಂಡಿ ವ್ಯವಸ್ಥೆಯಿದೆ. ಉಳಿದ 26 ಸ್ಲಂ ಗಳಲ್ಲಿ ಮಳೆಯ ನೀರು ಹಾಗೂ ದಿನ ಬಳಕೆಯ ನೀರು ಹೊರ ಹೋಗಲು ಯಾವುದೇ ರೀತಿಯ ಚರಂಡಿ ವ್ಯವಸ್ಥೆಯಿಲ್ಲ.

ಮುಖ್ಯವಾಗಿ ಇಲ್ಲಿಯ 18 ಸ್ಲಂ ಗಳಲ್ಲಿ ಬಿದ್ದ ಮಳೆಯ ನೀರು ಹೊರ ಹೋಗದಂತಹ ಸಹಜ ಸ್ಥಿತಿಯಿದೆ. ಮಳೆಗಾಲದ ದಿನಗಳಲ್ಲಿ ಈ 18 ಸ್ಲಂ ಗಳು ಹೆಚ್ಚು ಕಡಿಮೆ ನೀರಿನ ಹೊಂಡಗಳಂತೆ ಕಾಣಿಸುತ್ತದೆ. ಉಳಿದಂತೆ 15 ಸ್ಲಂಗಳಲ್ಲಿ ಮಳೆಯ ನೀರಿನ ಚರಂಡಿಯ ವ್ಯವಸ್ಥೆಯಿದೆಯಾದರೂ ಹೊಸಪೇಟೆಯ ಉಸುಗು ಮಣ್ಣಿನ ಹುಳು ಈ ಚರಂಡಿಗಳಿಗೆ ತುಂಬಿಕೊಂಡಿದೆ. ಚರಂಡಿ ನಿರ್ಮಾಣಕ್ಕಾಗಿ 44 ಲಕ್ಷಗಳ ಕಾರ್ಯ ಯೋಜನೆ ನಡೆಸಲಾಗಿದೆಯಾದರೂ ಇಲ್ಲಿಯ ತನಕ ಕೆಲಸಗಳು ನಡೆದಿಲ್ಲ.

### 4. ಕಸದ ವಿಲೇವಾರಿ

ಕಸದ ವಿಲೇವಾರಿ ಈ ಸ್ಲಂ ಗಳಲ್ಲಿ ಶೋಚನೀಯವಾಗಿದೆ. ಇಲ್ಲಿ 25 ಸ್ಲಂಗಳಲ್ಲಿ ಮಾತ್ರ ನಾಮಕಾವಸ್ಥೆಯ ರೀತಿಯಲ್ಲಿ ಕಸ ಸಂಗ್ರಹಣೆ ಮತ್ತು ವಿಲೇವಾರಿ ನಡೆಯುತ್ತಿದೆ. 34 ಸ್ಲಂಗಳಲ್ಲಿ ಕಸ ಸಂಗ್ರಹಣೆಯ ವ್ಯವಸ್ಥೆಯಾಗಲೀ ವಿಲೇವಾರಿಯ ಪದ್ಧತಿಯಾಗಲೀ ಇಲ್ಲ. ಈ ಸ್ಲಂಗಳು ಸರಿಸುಮಾರು ಕಸದ ಆಶ್ರಯತಾಣದಂತೆ ಬದಲಾಗಿವೆ.

### 5. ರಸ್ತೆ ವ್ಯವಸ್ಥೆ

ಸ್ಲಂ ಜನರನ್ನು ಎರಡನೇಯ ದರ್ಜೆಯ ನಾಗರಿಕರೆಂದು ಪರಿಗಣಿಸಿರುವ ಸ್ಪಷ್ಟ ಅಪಾಯವನ್ನು ಹೊಸಪೇಟೆಯಲ್ಲಿ ಗುರುತಿಸಬಹುದಾಗಿದೆ. ಇಲ್ಲಿನ ರಸ್ತೆಗಳೇ ಇದನ್ನು ಸಾರಿ ಹೇಳುತ್ತಿವೆ. ಇಲ್ಲಿಯ 58 ಸ್ಲಂಗಳಲ್ಲಿ ರಸ್ತೆ ವ್ಯವಸ್ಥೆ ತೀರ ಅದ್ವಾನದ ಸ್ಥಿತಿಯಲ್ಲಿದ್ದು ತುರ್ತಾಗಿ 680 ಕಿ.ಮೀ. ಗಳಷ್ಟು ರಸ್ತೆಯ ಅಗತ್ಯ ಈ ಸ್ಲಂಗಳಿಗಿದೆ. ಈ ರಸ್ತೆಗಳು ಮಳೆಗಾಲದ ದಿನಗಳಲ್ಲಿ ನೀರಿನ ತಾಣಗಳಾಗಿದ್ದರೆ, ಬೇಸಿಗೆ ಕಾಲದಲ್ಲಿ

ಧೂಳಿನ ತಾಣಗಳಾಗಿ ಮಾರ್ಪಡುತ್ತದೆ. ಇಂದು ಅಗತ್ಯವಿರುವಷ್ಟು ರಸ್ತೆ ನಿರ್ಮಾಣಕ್ಕೆ ಕನಿಷ್ಠ 78.81 ಲಕ್ಷ ರೂ ಗಳ ವೆಚ್ಚವನ್ನು ಮಾಡಬೇಕಾದ ಅಗತ್ಯವಿದೆ.

ಹೊಸಪೇಟೆಯ ಸ್ಲಂ ನಿವಾಸಿಗಳು ಬಹಳಷ್ಟು ಜನ ದಿನಗಗೂಲಿ ನೌಕರರೂ ಗಣಿಕಾರ್ಮಿಕರೂ, ವಾಹನ ಚಾಲಕರೂ ಆಗಿ ದಿನಗೂಲಿ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತಿದ್ದಾರೆ. ಇವರಿಗೆ ತುರ್ತಾಗಿ ದುಡಿಮೆಯ ಭದ್ರತೆ ಅತ್ಯಗತ್ಯ. ಗಣಿಗಳಲ್ಲಿ ಕೆಲಸ ಮಾಡುವ ಅನೇಕ ಜನರು ತಮ್ಮ ಜೀವದ ಅನಿಶ್ಚತೆಯೊಂದಿಗೆ ದುಡಿಯಬೇಕಾದ ಇಕ್ಕಟ್ಟಿಗೆ ಸಿಲುಕಿದ್ದಾರೆ. ಆದರೂ ಗಣಿಗುತ್ತಿಗೆದಾರರೂ ಈ ಕೂಲಿಕಾರರ ಕಡೆ ಕಿಂಚಿತ್ತೂ ಗಮನ ಹರಿಸುತ್ತಿಲ್ಲ ಗುತ್ತಿಗೆದಾರರ ಶೋಷಣೆಗಳಿಗೆ ದಿನವೂ ಇವರು ಗುರಿಯಾಗುತ್ತಿದ್ದಾರೆ.

ಕನಿಷ್ಠ ಉದ್ಯೋಗದ ಭದ್ರತೆ, ದುಡಿಮಗೆ ತಕ್ಕ ಕೂಲಿ, ಇವರಿಗೆ ಒದಗಿಸಿ ಕೊಡುವ ಜವಾಬ್ದಾರಿ ಸ್ಥಳೀಯ ಆಡಳಿತ ಸಂಸ್ಥೆಯ ಕಾನೂನು ಪಾಲಕರ ಮೇಲಿದೆ. ಅವರ ದುಡಿಮೆಗೆ ತಕ್ಕಂತೆ ಬದುಕನ್ನು ವ್ಯವಸ್ಥೆಗೊಳಿಸಿಕೊಡದಿದ್ದರೆ ಇಲ್ಲಿಯ ಸ್ಲಂ ಜನರು ಸದ್ಯದ ಸ್ಥಿತಿಯಿಂದ ಮೇಲೇಳುವ ಯಾವುದೇ ಭರವಸೆಗಳು ಕಾಣುತ್ತಿಲ್ಲ.

**6. ಬೀದಿ ದೀಪಗಳು**

ಇಲ್ಲಿನ 49 ಸ್ಲಂಗಳಲ್ಲಿ 19 ಸ್ಲಂಗಳಿಗೆ ಮಾತ್ರ ಬೀದಿದೀಪಗಳಿವೆ. 36 ಸ್ಲಂಗಳಿಗೆ ಭಾಗಶಃ ಬೀದಿದೀಪಗಳಿವೆ ಮತ್ತು ನಾಲ್ಕು ಸ್ಲಂಗಳಿಗೆ ಬೀದಿ ದೀಪಗಳಾಗಲೀ ವಿದ್ಯುತ್ ಸಂಪರ್ಕವಾಗಲಿ ಇಲ್ಲ.

**ಅಗತ್ಯವಿರುವ ಕೆಲವು ಮೂಲಭೂತ ಸೌಕರ್ಯಗಳು**

| ಮೂಲಭೂತ ಸೌಕರ್ಯಗಳು | | ಅಳತೆ |
|---|---|---|
| 1. ಅಗತ್ಯವಿರುವ ರಸ್ತೆ | : | ಪ್ರತಿ ಸ್ಲಂಗೆ 480 ಮೀ. ಸರಾಸರಿ |
| 2. ಅಗತ್ಯವಿರುವ ಚರಂಡಿ | : | ಪ್ರತಿ ಸ್ಲಂಗೆ ಸರಾಸರಿ 830 ಮೀ. |
| 3. ಅಗತ್ಯವಿರುವ ನೀರು ಪೂರೈಕೆ | : | ಪ್ರತಿ ತಲೆಗೆ ಸರಾಸರಿ 120 ಲೀಟರ್ |
| 4. ಅಗತ್ಯವಿರುವ ಬೀದಿ ದೀಪಗಳು | : | ಅಗತ್ಯವಿರುವಷ್ಟು |
| 5. ಸಾಮೂಹಿಕ ಶೌಚಾಲಯ | : | ಪ್ರತಿ ಸ್ಲಂಗೆ ಸರಾಸರಿ 05 |

**ಆಧಾರ :** 2001 ರ ಜನಗಣತಿಯ ಪ್ರಕಾರ ಹಳೆಯ ಸ್ಲಂಗಳು ಎಂಬ ಪುಸ್ತಕವನ್ನು ಮಾದರಿಯಾಗಿ ಇಟ್ಟುಕೊಂಡು. 2011 ರ ಜನಗಣತಿಯ ಮಾಹಿತಿಯನ್ನು ನೀಡಲಾಗಿದೆ.

## 7. ಶಿಕ್ಷಣ

ಹೊಸಪೇಟೆ ಪ್ರದೇಶದಲ್ಲಿ ಅಧಿಕವಾಗಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು, ಪದವಿ ಪೂರ್ವ ಕಾಲೇಜುಗಳು, ಪ್ರಥಮ ದರ್ಜೆ ಸ್ನಾತಕೊತ್ತರ ಕೋರ್ಸ್‌ಗಳನ್ನು ಒಳಗೊಂಡಿದೆ. ಇದು ಒಂದು ಶಿಕ್ಷಣದ ನೆಲೆಯಾಗಿದೆ ಎಂದು ಹೇಳಬಹುದು.

### 1. ಅಂಗನವಾಡಿ ಕೇಂದ್ರಗಳು

ಸಮುದಾಯ ಭವನದ ನಿರ್ಮಾಣಕ್ಕೆ ಈಗಾಗಲೇ ಎಲ್ಲಾ ಸ್ಲಂಗಳಲ್ಲೂ ಜನರಿಂದ ಬೇಡಿಕೆಯಿದೆ. ಇವರ ಬೇಡಿಕೆ ಬೇಡಿಕೆಯ ರೂಪದಲ್ಲೇ ಮುಂದುವರೆಯುತ್ತಿದೆ. ಹೊಸಪೇಟೆಯ 15 ಸ್ಲಂಗಳಲ್ಲಿ ಮಾತ್ರ ಬಾಲವಾಡಿ ಅಥವಾ ಅಂಗನವಾಡಿ ಕೇಂದ್ರಗಳಿವೆ. ಉಳಿದ 44 ಸ್ಲಂಗಳಲ್ಲಿ ಇಲ್ಲ. ಮಕ್ಕಳ ಮಾನಸಿಕ, ದೈಹಿಕ ಆರೋಗ್ಯದ ದೃಷ್ಟಿಯಿಂದ ಅಂಗನವಾಡಿ ಕೇಂದ್ರಗಳು ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತಿವೆ. ಸ್ಲಂಗಳಲ್ಲಿನ ತಂದೆ-ತಾಯಿಗಳಿಬ್ಬರೂ ದುಡಿಮೆಯಲ್ಲಿ ತೊಡಗುವುದರಿಂದ ಮಕ್ಕಳು ನಿರ್ಲಕ್ಷದ ಆಪಾಯಕ್ಕೆ ಗುರಿಯಾಗುತ್ತಾರೆ. ಇದರಿಂದ ಭಾರತದ ಭಾವೀ ಪ್ರಜೆಗಳನ್ನು ರಕ್ಷಿಸಲು ಅಂಗನವಾಡಿ ಕೇಂದ್ರಗಳ ಅಗತ್ಯ ಎಲ್ಲಾ ಸ್ಲಂಗಳಿಗೂ ಇದೆ ಎಂಬುದೇ ನಮ್ಮ ಆಳುವ ಜನರಿಗೆ ತಿಳಿಯದಿರುವುದು ದುರಂತ.

### 2. ಪ್ರಾಥಮಿಕ ಶಿಕ್ಷಣ

ಹೊಸಪೇಟೆಯ 39 ಸಾರ್ವಜನಿಕ ಭೂ ಒಡೆತನದ ಸ್ಲಂಗಳಲ್ಲಿ ಹಾಗೂ 8 ಖಾಸಗಿ ಭೂ ಒಡೆತನದ ಸ್ಲಂಗಳಲ್ಲಿ ಪ್ತಾಥಮಿಕ ಶಾಲೆಗಳ ಲಭ್ಯತೆಯಿದೆ. ಉಳಿದಂತೆ 12 ಸ್ಲಂಗಳಲ್ಲಿ ಪ್ರಾಥಮಿಕ ಶಾಲೆಗಳ ಲಭ್ಯತೆಯಿಲ್ಲ. ಇಲ್ಲಿಯ ಸ್ಲಂ ಗಳ ಶೇಕಡ 21 ರಷ್ಟು ಮಕ್ಕಳಿಗೆ ಕಲಿಯಲು ಶಾಲೆಗಳೇ ಇಲ್ಲವಾದರೆ ಶೇಕಡ 46 ರಷ್ಟು ಮಕ್ಕಳು ಶಾಲೆಗಳ ಲಭ್ಯತೆಯಿದ್ದರು ಶಾಲೆಗಳಿಗೆ ಹೋಗುತ್ತಿಲ್ಲ.

ಈ ಸ್ಲಂಗಳಲ್ಲಿ ಜನರ ಮಾನಸಿಕ ಮತ್ತು ದೈಹಿಕ ಆರೋಗ್ಯವನ್ನು ಉತ್ತಮಗೊಳಿಸುವ ಯಾವುದೇ ಕಾರ್ಯಕ್ರಮಗಳು ವ್ಯವಸ್ಥಿತವಾಗಿ ನಡೆಯುತ್ತಿಲ್ಲ. ಬಹುತೇಕ ಸ್ಲಂಗಳಲ್ಲಿ ಪ್ರಾಥಮಿಕ ಶಾಲೆಗಳು ಇವೆ ಆದರೂ ಇನ್ನು 12 ಸ್ಲಂಗಳಲ್ಲಿ ಪ್ರಾಥಮಿಕ ಶಾಲೆಯನ್ನು ತೆರೆಯುವಲ್ಲಿ ಶಿಕ್ಷಣ 24.5 ರಷ್ಟಿದೆ. ಈ ಶೈಕ್ಷಣಿಕ ದುರಾವಸ್ಥೆಯನ್ನು ಮೇಲ್ಕಂಡ ಪ್ರಮಾಣವೇ ದೃಢಪಡಿಸಿದೆ.

ಕಡ್ಡಾಯ ಶಿಕ್ಷಣ ಉಚಿತ ಶಿಕ್ಷಣಗಳಂತಹ ಕಾರ್ಯಕ್ರಮಗಳೂ ಕೂಡ ವಿಫಲಗೊಂಡಿದೆ. ಮಕ್ಕಳ ಮಾನಸಿಕ ಸ್ಥಿತಿಯನ್ನು ಅರಿತು ಕೌಟುಂಬಿಕ ಸಂಕಷ್ಟಗಳಿಗೆ ಪರಿಹಾರವನ್ನು ಕಾಣಿಸಿದೆ. ಹೊರತು ಇವರ ಶೈಕ್ಷಣಿಕ ಮಟ್ಟವನ್ನು ಉತ್ತಮಗೊಳಿಸಲು ಸಾಧ್ಯವಾಗದಂತಹ ಸ್ಥಿತಿಯಿದೆ.

### 8. ಆರೋಗ್ಯ

ಪ್ರಾಥಮಿಕ ಆರೋಗ್ಯ ಕೇಂದ್ರಗಳ ಕೊರತೆ ಹೊಸಪೇಟೆಯ ಸ್ಲಂ ಜನರಿಗೆ ಶೇ 50.8 ರಷ್ಟಿದೆ. ಶೇ.49.2 ರಷ್ಟು ಜನರಿಗೆ ಪ್ರಾಥಮಿಕ ಆರೋಗ್ಯ ಕೇಂದ್ರದ ಲಭ್ಯತೆಯಿದೆಯೆಂದು ಹೇಳಲಾಗುತ್ತಿದೆಯಾದರೂ ಔಷಧಿ ಮತ್ತು ವೈದ್ಯರ ಕೊರತೆಯಿಂದ ಇವು ನಗೆ ಪಾಟಲಿಗೆ ಈಡಾಗಿದೆ. ಶ್ರೀಮಂತರ ಬಡಾವಣೆಯ ಅಸ್ಪತ್ರೆಯ ಸ್ಥಿತಿ ಇವುಗಳಂತೆ ಇದೆಯೇ?

ಇಲ್ಲಿ ಎಲ್ಲಾ ಸ್ಲಂಗಳ ಜನರು ಕನಿಷ್ಠ ಶುಚಿತ್ವದ ಕೊರತೆಯಿಂದ, ನೈರ್ಮಲ್ಯದ ಕೊರತೆಯಿಂದ ಬಳಲುತ್ತಿದ್ದಾರೆ. ಇವರ ಅಡಿಗೆಯ ಮನೆ, ವಾಸದ ಮನೆ, ಮಲಗುವ ಕೋಣೆ, ಎಲ್ಲವೂ ಒಂದೇ ಆಗಿರುತ್ತದೆ. ಇಷ್ಟರ ಜೊತೆಗೆ ಕಸ ವಿಲೇವಾರಿಯಲ್ಲಿನ ಲೋಪದೋಷದಿಂದಾಗಿ ಚರಂಡಿ ಮತ್ತು ಒಳಚರಂಡಿಯ ಅಲಭ್ಯತೆಯಿಂದಾಗಿ ಸ್ಲಂ ಪ್ರದೇಶಗಳ ಇಲ್ಲಿ ವಾಸನೆ ಜನ ಕೇಂದ್ರಗಳಾಗಿ, ರೋಗಾಣುಗಳ ಉತ್ಪಾದಕ ಘಟಕಗಳಂತೆ ಪರಿವರ್ತನೆಗೊಂಡಿದೆ. ಈ ಬಗ್ಗೆ ಇಲ್ಲಿಯ ತನಕ ನಗರಾಡಳಿತ ಕಿಂಚಿತ್ತು ಗಮನ ಹರಿಸಿಲ್ಲ.

ಬೇರೆಲ್ಲಾ ನಗರಗಳಿಗಿಂತ ಹೊಸಪೇಟೆಯ ಸ್ಲಂ ಜನರ ಬದುಕಿನ ಸ್ಥಿತಿ ನಿಜಕ್ಕೂ ದುರ್ಬಲವಾಗಿದೆ. ಇಲ್ಲಿ ಮೂಳಭೂತ ಸೌಕರ್ಯಗಳ ಕೊರತೆ ಎಷ್ಟಿದೆಯೆಂದರೆ ನಿಜಕ್ಕೂ ಮಾನವ ಕುಲಕ್ಕೆ ಅವಮಾನವಾಗಿಸುವ ಮಟ್ಟದಲ್ಲಿದೆ.

ಹೊಸಪೇಟೆ ನಗರದಲ್ಲಿ ಸರ್ಕಾರಿ ಅಸ್ಪತ್ರೆ ಇದ್ದರೂ ಸಹ ಜನ ಖಾಸಗಿ ಅಸ್ಪತ್ರೆಗಳಿಗೆ ಹೋಗುತ್ತಿದ್ದಾರೆ. ಕಾರಣ ಸರಿಯಾದ ಚಿಕಿತ್ಸೆ ನೀಡದಿರುವುದು. ಸರಿಯಾದ ಸಿಬಂದ್ದಿ ವ್ಯವಸ್ಥೆ ಇಲ್ಲ ಇರುವುದು. ಇಲ್ಲಿನ ವೈದ್ಯರು ಬೇಜವಾಬ್ದಾರಿಯಿಂದ ಚಿಕಿತ್ಸೆ ನೀಡುವುದ್ದರಿಂದ ಇಲ್ಲಿನ ಎಲ್ಲ ನಾಗರಿಕರು ಖಾಸಗಿ ದಾವಖನೆಗಳಿಗೆ ಹೆಚ್ಚಾಗಿ ಹೋಗುತ್ತಾರೆ.

### 9. ಸಮುದಾಯ ಭವನ

ಹೊಸಪೇಟೆಯ 59 ಸ್ಲಂಗಳಲ್ಲಿ ಕೇವಲ 18 ಸ್ಲಂಗಳಿಗೆ ಮಾತ್ರ ಸಮದಾಯ ಭವನಗಳಿವೆ. ಸಮುದಾಯ ಭವನ ಇವರ ಸಂಘಟನಾತ್ಮಕ ಚಟುವಟಿಕೆಗಳಿಗೆ ಮತ್ತು ಪರಸ್ಪರ ತಿಳುವಳಿಕೆಗೆ ತೀರಾ ಅಗತ್ಯವಾದ ವೇದಿಕೆಗಳು ತಮ್ಮ ನಡುವಿನ ದುಃಖ-ದುಮ್ಮಾನಗಳನ್ನು ಶೋಷಣೆಯನ್ನು ಪರಸ್ಪರರು ತಿಳಿದುಕೊಳ್ಳಲು 41 ಸ್ಲಂಗಳಲ್ಲಿ ಸಮುದಾಯ ಭವನೆಗಳೇ ಇಲ್ಲ.

### 10. ಸಂಘ-ಸಂಸ್ಥೆ

ಸಾಮೂದಾಹಿಕ ಹಿತಾಸಕ್ತಿಗಳ ಆಧಾರದ ಮೇಲೆ ಒಗ್ಗೂಡಿ ತಮಗೆ ದಕ್ಕಬೇಕಾದ ಸೌಲಭ್ಯಗಳನ್ನು ಪಡೆಯುವ ಅನಿವಾರ್ಯತೆ ಇಲ್ಲಿಯ ಸ್ಲಂ ಜನರಿಗಿದೆ. ಹೊಸಪೇಟೆಯಲ್ಲಿ ಸಮುದಾಯ ಆಧಾರಿತ ಸಂಘ ಸಂಸ್ಥೆಗಳನ ಕೊರತೆ ತೀವ್ರವಾಗಿದೆ. ಕೇವಲ 15 ಸ್ಲಂಗಳಲ್ಲಿ ಮಾತ್ರ ಸ್ವಲ್ಪ ಮಟ್ಟಿನ ಇಂತಹ

ಚಟುವಟಿಕೆಗಳು ನಡೆಯುತ್ತಿವೆ. ಉಳಿದ 44 ಸ್ಲಂಗಳ ಜನರು ಯಾವುದೇ ಸಂಘ ಸಂಸ್ಥೆಗಳನ್ನು ಹೊಂದಿಲ್ಲ.

ಒಟ್ಟಾರೆ ಹೊಸಪೇಟೆಯ ಸಾಮಾನ್ಯ ಬಡಾವಣೆಗಳಿಗೆ ಹೋಲಿಸಿದರೆ ಇಲ್ಲಿಯ ಸ್ಲಂ ಜನರ ಬದುಕು ಶೋಚನೀಯವಾಗಿದೆ. ಹೊಸಪೇಟೆಯ ಸ್ಲಂ ಜನರ ದೈನಂದಿನ ಜೀವನ ನಿಜಕ್ಕೂ ನೋಡುಗರ ಎದೆಯನ್ನು ನಡುಗಿಸುವಂತಿದೆ. ಇಲ್ಲಿಯ ನಗರಾಡಳಿತ, ರಾಜ್ಯ ಸರ್ಕಾರ, ಜಿಲ್ಲಾಡಳಿತಗಳು ಈ ಬಗ್ಗೆ ತುರ್ತಾಗಿ ಗಮನ ಹರಿಸಬೇಕಿದೆ. ಇಲ್ಲವಾದರೆ ಸ್ಲಂ ಜನರ ಸಂಘಟಿತ ರಭಸಕ್ಕೆ ಇವೆಲ್ಲವು ಮುಂದೊಂದು ದಿನ ಗುರಿಯಾಗಬೇಕಾಗುತ್ತದೆ.

ಇಂತಹ ಅಮಾನವೀಯ ಜೀವನದ ವಿರುದ್ದ ಎಚ್ಚರಗೊಳ್ಳದಿದ್ದರೆ ದುಡಿಯುವ ಬಹುಪಾಲು ಜನರು ಶಾಶ್ವತ, ಸಾಮಾಜಿಕ, ಆರ್ಥಿಕ, ದೈಹಿಕ, ನಿಶ್ಯಕ್ತಿಗೆ ಗುರಿಯಾಗುವುದರಲ್ಲಿ ಅನುಮಾನಗಳಿಲ್ಲ. ಪ್ರಗತಿಪರ ಸಂಘಟನೆಗಳ ನಾಯಕರು ಈ ಬಗ್ಗೆ ಗಮನಹರಿಸಬೇಕಾದ ತುರ್ತಿದೆ. ಇಲ್ಲವಾದರೆ ಇಂಥದೊಂದು ಚಾರಿತ್ರಿಕ ಅಪವಾದವನ್ನು ಹೊರಬೇಕಾದ ಅನಿವಾರ್ಯತೆ ಬೀಳುತ್ತದೆ.

## 2.5 ಸ್ಥಳೀಯ ಆಡಳಿತ

ಹೊಸಪೇಟೆ ತಾಲ್ಲೂಕಿನಲ್ಲಿ ಆಯ್ದುಕೊಂಡ ನಗರಗಳು ಸ್ಥಳೀಯ ಆಡಳಿತವನ್ನು ನಿಭಾಯಿಸುತ್ತಿದೆ. ಸ್ಥಳೀಯ ಆಡಳಿತವು ನಗರದ ಮತ್ತು ಜನದಟ್ಟಣೆಯ ಒತ್ತಡವನ್ನು ಸರಿಯಾದ ರೀತಿಯಲ್ಲಿ ನಿಭಾಯಿಸುವ ಸಶಕ್ತತೆಯಿಂದ ಕೂಡಿಲ್ಲ. ಹಾಗೇ ನೋಡುವುದಾದರೆ ಹೊಸಪೇಟೆಯ ನಗರಾಡಳಿತವು ನೀರು ಸರಬರಾಜು, ಒಳಚರಂಡಿ ವ್ಯವಸ್ಥೆ, ರಸ್ತೆಗಳು ಮತ್ತು ಕಸ ನಿರ್ವಹಣೆ ಮುಂತಾದ ಎಲ್ಲಾ ವಿಚಾರಗಳಲ್ಲೂ ಸೋಲನ್ನು ಕಂಡಿದೆ. ಪ್ರತಿ ದಿನ ಒಬ್ಬ ವ್ಯಕ್ತಿಯ ಅಗತ್ಯಕ್ಕೆ 120 ಲೀಟರ್‌ನಷ್ಟು ನೀರಿನ ಅಗತ್ಯವಿದೆ. ಆದರೆ ಸ್ಥಳೀಯ ಆಡಳಿತವು ವ್ಯವಸ್ಥೆಗೊಳಿಸಲಾಗಿರುವುದು ಕೇವಲ 25 ಲೀಟರ್ ನಷ್ಟೆ. ನೀರನ್ನು ಒದಗಿಸಿಕೊಡುತ್ತಿದ್ದಾರೆ. ಒಳಚರಂಡಿ ವ್ಯವಸ್ಥೆ ಕೂಡ ಹೊಸಪೇಟೆಯಲ್ಲಿ ತೀರಾ ಅದಗೆಟ್ಟ ಸ್ಥಿತಿಯಲ್ಲಿದೆ.

500 ವರ್ಷಳ ಹಿಂದೆಯೇ ವಿಜಯನಗರದ ಸಾಮ್ರಾಜ್ಯ ಹಂಪಿ ಮತ್ತು ಹೊಸಪೇಟೆಗಳಲ್ಲಿ ಒಳಚರಂಡಿ ವ್ಯವಸ್ಥೆಯನ್ನು ವ್ಯವಸ್ಥಿತಗೊಳಿಸಿದೆ. 500 ವರ್ಷಗಳ ಹಿಂದೆಯೇ ಗೊತ್ತಾದ ಈ ಒಳಚರಂಡಿ ತಾಂತ್ರಿಕತೆ ಇಂದು ಸ್ವತಃ ಹೊಸಪೇಟೆಯ ಜನರಿಗೆ ಕೈಗೆಟುಕದಿರುವುದನ್ನು ದುರಂತವೆನ್ನೋಣವೇ? ಕೇವಲ ಭಾಗಶಃ ಒಳಚರಂಡಿ ವ್ಯವಸ್ಥೆ ಮಾತ್ರ ಹೊಸಪೇಟೆಯಲ್ಲಿ ಇರುವುದು. ನಾಗರೀಕರು ಅವ್ಯಾಹತವಾಗಿ ಒಳಚರಂಡಿ ಬೇಡಿಕೆ ಇಡುತ್ತಿದ್ದರೂ ಇಲ್ಲಿಯ ನಗರಾಡಳಿತವು ಭಾಗಶಃ ಮಾತ್ರ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಸಾಧ್ಯವಾಗಿದೆ.

## ಅಡಿಟಿಪ್ಪಣಿ


1. ಒಡೆಯರ್ ಡಿ. ಹೆಗಡೆ, ಅನ್ನಪೂರ್ಣೇಶ್ವರಿ(ಸಂ). – **ಆರ್ಥಿಕ ನೆಲೆಗಳು ಮತ್ತು ಆಯಾಮಗಳು** – ಮಾನವ ಅಭಿವೃದ್ಧಿಗಳ ಕೇಂದ್ರ ಮೈಸೂರು – 2003. ಪು.ಸ. – 60
2. ರವಿಂದ್ರ ಕೊಪ್ಪರ್ – **ಗ್ರಾಮೀಣ ಮತ್ತು ನಗರ ಸಮಾಜಶಾಸ್ತ್ರ** – ವಿಜಯ ಬುಕ್ ಡಿಪೋ ಗದಗ – 1991. ಪು.ಸ. – 99
3. ಮಹದೇವ ಸಿ. ಸುಬ್ಬಣ್ಣ ರೈ ಎ. ಮಾಧವ ಪರಾಜೆ – **ಹೊಸಪೇಟೆ ತಾಲ್ಲೂಕು ದರ್ಶನ** – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ – 2002. ಪು.ಸ. – 81
4. ತುಕರಾಮ ರಾವ್ – **ಹೊಸಪೇಟೆ (ಚಾರಿತ್ರಿಕ ವಿವೇಚನೆ : ಐತಿಹ್ಯ : ಪರಿಶೀಲನೆ)** – ಶರಣರ ಸುವಾಸಿನಿ ಬಳಗ ಹೊಸಪೇಟೆ – 1997. ಪು.ಸ. –44
5. ರಾಜೇಂದ್ರ ವೈ.ಜೆ. ಮಂಜುನಾಥ ಎಂ. – **ಹೊಸಪೇಟೆಯ ಹಳೆ ಸ್ಲಂಗಳು** – ಜನ ಸಹಯೋಗ ಪ್ರಕಾಶಕರು – ಅಕ್ಷರ ವಿನ್ಯಾಸ ಎಸ್.ಆರ್. ನಗರ ಬೆಂಗಳೂರು – 2001. ಪು.ಸ. – 10
6. ಅಶೋಕ – **ಕೊಳಚೆ ಪ್ರದೇಶದಲ್ಲಿ ಶೈಕ್ಷಣಿಕ ಸಮಸ್ಯೆಗಳು** – ಸಮಾಜಶಾಸ್ತ್ರ ಅಧ್ಯಯನ. ಪು.ಸ. – 33
7. Gopal Bhargova – **Urban Problems & Policy Perspectives** – Abhinav Publication New Delhi – 1972.

# ಅಧ್ಯಾಯ – 03

## 1. ಕೊಳೆಗೇರಿಯಲ್ಲಿನ ಸಮುದಾಯಗಳ ಸಾಮಾಜಿಕ ಹಿನ್ನೆಲೆ ಮತ್ತು ಸ್ಥಿತಿಗತಿಗಳು

3.1 ಕುಟುಂಬದ ಸ್ವರೂಪ

3.2 ವೈವಾಹಿಕ ಸ್ಥಿತಿ

3.3 ಕೊಳಗೇರಿ ನಿವಾಸಿಗಳ ಆಚರಣೆಗಳು

3.4 ಆರೋಗ್ಯ ಮತ್ತು ಆಹಾರ ಪದ್ಧತಿ

3.5 ದೈವಾರಾಧನೆ

3.6 ಉಡುಗೆ – ತೊಡುಗೆಗಳು

## 3. ಕೊಳೆಗೇರಿಯಲ್ಲಿನ ಸಮುದಾಯಗಳ ಸಾಮಾಜಿಕ ಹಿನ್ನೆಲೆ ಮತ್ತು ಸ್ಥಿತಿಗತಿಗಳು

ಮಾನವನು ಇರುವದೇ ಸಮಾಜದಲ್ಲಿ ಅವನು ಸಂಘ ಜೀವಿ, ಸಮಾಜೀವಿ, ಅವನು ಒಂಟಿಯಾಗಿ ಬದುಕಲಾರ ಅಂತೆಯೇ ಮಾನವ ತನ್ನ ವ್ಯಕ್ತಿತ್ವವನ್ನು ಸಮಾಜದ ವ್ಯವಸ್ಥೆಯಲ್ಲಿ ಸಮಾಜದ ವ್ಯವಸ್ಥೆಯಲ್ಲಿ ಮಾತ್ರ ರೂಪಿಸಿಕೊಳ್ಳಲು ಸಾಧ್ಯ. ಹಾಗೆಯೇ ವ್ಯಕ್ತಿಯೂ ತನ್ನ ಜೀವನದ ಸಂಪೂರ್ಣ ಭಾಗವನ್ನು ಸಮಾಜದಲ್ಲಿ ಕಳೆಯಬೇಕಾಗುತ್ತದೆ.

ಸಾಮಾಜಿಕ ಜೀವನ ಮಾನವನೊಬ್ಬನಿಗೆ ಸೀಮಿತವಾದುದ್ದಲ್ಲ. ಇದು ಪ್ರಾಣಿ ಪಕ್ಷಿಗಳಿಗೂ ಸಂಬಂಧಿಸಿದೆ. ಮಾನವ ಸಮಾಜವು ಸಂಬಂಧಗಳ ಬಲೆಯಾಗಿದೆ. ಸ್ಲಂ ನಗರಗಳಲ್ಲಿ ಎಲ್ಲ ಸಮುದಾಯದವರು ತಮ್ಮ ವಿಶಿಷ್ಠ ಸಾಮಾಜಿಕ ಜೀವನವನ್ನು ಶತ-ಶತಮಾನಗಳಿಂದ ರೂಢಿಸಿಕೊಂಡಿದ್ದಾರೆ. ಈ ಸಮುದಾಯದವರ ಜೀವನ ಶೈಲಿ, ಸಂಸ್ಕೃತಿ, ಆಂತರಿಕ ಹಾಗೂ ಬಾಹ್ಯ ಒತ್ತಡಗಳಿಂದಾಗಿ ಈ ಸಮುದಾಯದ ಸಾಮಾಜಿಕ ಜೀವನ ವಿಧಾನವು ಕೂಡಾ ಆಗಾಗ ಬದಲಾವಣೆಯಾಗಿವೆ. ಆದರೂ ಹುಟ್ಟು, ಸಾವು, ಮದುವೆಗಳಿಗೆ ಸಂಬಂಧಿಸಿದ ಆಚಾರ ವಿಚಾರಗಳಲ್ಲಿ ಮೂಲಾಂಶಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಲೋಕರೂಢಿಗಳು, ಸಂಪ್ರದಾಯಗಳು, ಪರಸ್ಪರ ಸಹಾಯ, ವಿವಿಧ ನಿಯಮಗಳು, ಉಡುಗೆ-ತೊಡುಗೆ, ಉಳಿಸಿಕೊಂಡು ಬಂದಿದೆ. ವಸತಿ, ಬೆಡಗುಗಳು, ಕುಟುಂಬಗಳು, ನ್ಯಾಯ ಪದ್ಧತಿ ಹಾಗೂ ಸಾಮಾಜಿಕ ನಿಯಂತ್ರಣಗಳನ್ನೊಳ್ಳಗೊಂಡ ಕ್ರಮಬದ್ಧವಾದ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದೆ.

### 3.1 ಕುಟುಂಬದ ಸ್ವರೂಪ

ಪ್ರಸುತ್ತ ಇಂದು ಹೊಸಪೇಟೆ ನಗರದಲ್ಲಿ 2011 ರ ಜನಗಣತಿಯ ಪ್ರಕಾರ 59 ಸ್ಲಂಗಳಲ್ಲಿ 2,03,467 ಜನರು ವಾಸವಾಗಿದ್ದಾರೆ. ಈ ಸ್ಲಂಗಳಲ್ಲಿ ಒಟ್ಟಾರೆಯಾಗಿ 44,084 ಕುಟುಂಬಗಳಿವೆ. ಒಟ್ಟು ಸ್ಲಂ ಜನ ಸಂಖ್ಯೆಯು ಶೇಕಡ 60 ರಷ್ಟು ಜನರು ನೊಂದಾಯಿತ ಸ್ಲಂಗಳಲ್ಲಿ ಬದುಕುತ್ತಿದ್ದಾರೆ. ಶೇಕಡ 80 ರಷ್ಟು ಜನರು ನೋದಾಯಿತ ಸ್ಲಂಗಳಲ್ಲಿ ವಾಸವಾಗಿದ್ದಾರೆ. ಹಾಗೆಯೇ ಒಟ್ಟು ಸ್ಲಂ ಜನಸಂಖ್ಯೆಯ ಶೇಕಡ 20 ರಷ್ಟು ಜನರು ನೊಂದಣಿ ರಹಿತ ಸ್ಲಂಗಳಲ್ಲಿ ಬದುಕುತ್ತಿದ್ದಾರೆ ಹೇಳಲಾಗಿದೆ.

**ಹೊಸಪೇಟೆಯ ಸ್ಲಂಗಳ ಜನಸಂಖ್ಯೆ ಮತ್ತು ಕುಟುಂಬಗಳು**

| | | | |
|---|---|---|---|
| 1. | ಸ್ಲಂಗಳ ಸಂಖ್ಯೆ | : | 59 |
| 2. | ಸ್ಲಂ ಜನಸಂಖ್ಯೆ | : | 2,03,467 |
| 3. | ಒಟ್ಟು ಜನಸಂಖ್ಯೆಯಲ್ಲಿ ಶೇಕಡವಾರು | : | 49.2 |
| 4. | ಸ್ಲಂ ಕುಟುಂಬಗಳು | : | 44,084 |
| 5. | ಸ್ಲಂ ಕುಟುಂಬಗಳ ಗಾತ್ರ | : | 5.05 |

6. ಸ್ಲಂಗಳ ಸರಾಸರಿ ಗಾತ್ರ (ಜನ) : 1834

7. ಸ್ಲಂಗಳ ಸರಾಸರಿ ಗಾತ್ರ (ಕುಟುಂಬಗಳು) : 300 ಕ್ಕಿಂತ ಹೆಚ್ಚು

ಆಧಾರ : 2001 ರ ಜನಗಣತಿಯ ಪ್ರಕಾರ ಹಳೆಯ ಸ್ಲಂಗಳು ಎಂಬ ಪುಸ್ತಕವನ್ನು ಮಾದರಿಯಾಗಿ ಇಟ್ಟುಕೊಂಡು. 2011 ರ ಜನಗಣತಿಯ ಮಾಹಿತಿಯನ್ನು ನೀಡಲಾಗಿದೆ.

ಹೊಸಪೇಟೆ ನಗರವು 2011 ರ ಜನಗಣತಿಯ ಪ್ರಕಾರ ಸ್ಲಂಗಳಲ್ಲಿ ಒಟ್ಟಾರೆ 44,076 ರಷ್ಟು ಕುಟುಂಬಗಳನ್ನು ಒಳಗೊಂಡಿದೆ. ಈ ಒಂದು ಅಧ್ಯಯನದಲ್ಲಿ ಕೇವಲ ಮೂರು ಸ್ಲಂಗಳನ್ನು ಮಾತ್ರ ಅಧ್ಯಯನ ಮಾಡಲಾಗಿದೆ. ಇದರಲ್ಲಿ ಪ್ರೇಮನಗರದಲ್ಲಿ 103 ಕುಟುಂಬಗಳನ್ನು ಒಳಗೊಂಡ ಒಂದು ಸ್ಲಂ ಆಗಿದೆ. ಇಲ್ಲಿ ಒಟ್ಟಾರೆ ಪುರುಷರು 267 ಜನ ಹಾಗೂ ಮಹಿಳೆಯರು 253 ಜನ ಒಟ್ಟು 520 ಜನಸಂಖ್ಯೆಯನ್ನು ಒಳಗೊಂಡಿದೆ.

ಶಿರಸಿನಕಲ್ಲು ನಗರದಲ್ಲಿ 681 ಕುಟುಂಬಗಳನ್ನು ಒಳಗೊಂಡ ಒಂದು ಸ್ಲಂ ಆಗಿದೆ. ಇಲ್ಲಿ ಒಟ್ಟಾರೆ ಪುರುಷರು 1461 ಜನ ಹಾಗೂ ಮಹಿಳೆಯರು 1467 ಜನ ಒಟ್ಟು 2928 ಜನಸಂಖ್ಯೆಯನ್ನು ಒಳಗೊಂಡಿದೆ. ಕಾರಿಗಿನೂರು ವಾಲ್ಮೀಕಿ ನಗರದಲ್ಲಿ 173 ಕುಟುಂಬಗಳನ್ನು ಒಳಗೊಂಡಿದೆ. ಇಲ್ಲಿ ಒಟ್ಟಾರೆ ಪುರುಷರು 431 ಜನ ಹಾಗೂ 442 ಮಹಿಳೆಯರನ್ನು ಒಟ್ಟು 873 ರಷ್ಟು ಜನಸಂಖ್ಯೆಯನ್ನು ಒಳಗೊಂಡ ಒಂದು ಸ್ಲಂ ನಗರವಾಗಿದೆ ಎಂದು ಹೇಳಲಾಗಿದೆ.

ಹೊಸಪೇಟೆ ನಗರದಲ್ಲಿ ಹಾಗೂ ಎಲ್ಲ ಸ್ಲಂಗಳಲ್ಲಿ ಪುರುಷರಿಗಿಂತ ಮಹಿಳೆಯರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿ ಇದೆ ಎಂದು ಸಮೀಕ್ಷೆಯ ಮೂಲಕ ತಿಳಿಯಲಾಗಿದೆ.

### 3.2 ವೈವಾಹಿಕ ಸ್ಥಿತಿ

ಸ್ಲಂ ನಗರಗಳಲ್ಲಿ ವೈವಾಹಿಕ ಸ್ಥಿತಿಯು ಕಂಡು ಬರುತ್ತದೆ. ಸ್ವಭಾವತಃ ಸಂಘಜೀವಿಯಾದ ಮಾನವ ಸಮಾಜದ ತನ್ನ ವಿವಿಧ ಬೇಡಿಕೆಗಳ ಪೂರೈಕೆಗಾಗಿ ವಿವಿಧ ಪ್ರಕಾರದ ಸಂಘಗಳನ್ನು ಸ್ಥಾಪಿಸಿಕೊಂಡಿದ್ದಾನೆ. ಕುಟುಂಬ ಮಾನವ ಸಮಾಜದ ಮೂಲಭೂತ ಸಂಘವಾಗಿದೆ. ಕುಟುಂಬ ವ್ಯವಸ್ಥೆ ಮಾನವ ಸಮಾಜದ ಉಗಮದಿಂದಲೂ ಬೆಳೆದು ಬಂದಿದೆ. ಕುಟುಂಬ ಸಮಾಜದ ಭದ್ರವಾದ ಬುನಾದಿಯಾಗಿದೆ. ಹಾಗೆಯೇ ವೈವಾಹಿಕ ಸಂಬಂಧಗಳು ಸಹ ಕುಟುಂಬದ ಭದ್ರವಾದ ಬುನಾದಿಯಾಗಿದೆ ಎಂದು ಹೇಳಲಾಗಿದೆ.

ಒಂದು ಕುಟುಂಬದಲ್ಲಿ ಕೇವಲ ಪತಿ ಪತ್ನಿ ಹಾಗೂ ಮಕ್ಕಳನ್ನಲ್ಲದೆ ಪತಿಯ ತಂದೆ ತಾಯಿ ಅವನ ಸಹೋದರರು ಅವರ ಪತ್ನಿಯರು ಮತ್ತು ಮಕ್ಕಳನ್ನು ಒಳಗೊಂಡಿರುತ್ತದೆ. ಹಾಗೆಯೇ ವೈವಾಹಿಕ ಜೀವನದಲ್ಲಿ ವಿವಾಹಿತ, ಅವಿವಾಹಿತ, ವಿಧುರ-ವಿಧವೆ, ಯನ್ನು ಒಳಗೊಂಡ ಒಂದು ಜೀವನವಾಗಿದೆ.

### 3.3 ಕೊಳಗೇರಿ ನಿವಾಸಿಗಳ ಆಚರಣೆಗಳು

ಹೊಸಪೇಟೆ ನಗರದಲ್ಲಿ ಸ್ಲಂ ನಿವಾಸಿಗರಲ್ಲಿ ಅನೇಕ ಆಚರಣೆಗಳು ಇವೆ. ಮನುಷ್ಯನ ಜೀವನದಲ್ಲಿ ಹುಟ್ಟು, ವಿವಾಹ, ಮತ್ತು ಸಾವು ಪ್ರಮುಖ ಹಂತಗಳಾಗಿವೆ. ಇವುಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ಸಮಾಜದಲ್ಲಿ ನಂಬಿಕೆ, ಆಚರಣೆ, ಸಂಪ್ರದಾಯಗಳಿವೆ. ಅದರಂತೆ ಭಾರತೀಯ ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿ ತನ್ನ ಜೀವನದಲ್ಲಿ ಕೆಲವು ಸಂಸ್ಕಾರಗಳಿಗೆ ಒಳಪಡುತ್ತಾನೆ. ದೇವತಾರಾಧನೆ ಮತ್ತು ಕುಟುಂಬ ಆಚರಣೆಗಳು, ಹುಟ್ಟಿನಿಂದ ಸಾವುವರೆಗಿನ ಆಚರಣೆಗಳು, ನಿಸರ್ಗ ಸಂಬಂಧಿ ಆಚರಣೆಗಳು, ಕೃಷಿ ಸಂಬಂಧಿ ಆಚರಣೆಗಳು. ಹೀಗೆ ಸ್ಲಂ ಜನರಲ್ಲಿ ಅನೇಕ ರೀತಿಯ ಆಚರಣೆಗಳನ್ನು ಕಾಣಬಹುದು. ಹುಟ್ಟಿನಿಂದ ಹಿಡಿದು ಸಾಯುವವರೆಗೆ ಹಲವಾರು ಸಂಸ್ಕಾರಗಳು ಆಚರಿಸಲ್ಪಡುತ್ತವೆ. ತಮ್ಮದೇ ಆದ ಕುಲ ಪಂಚಾಯತಿಯ ಮುಖಾಂತರ ನ್ಯಾಯ ನಿರ್ಣಯ ಮಾಡಿಕೊಳ್ಳುತ್ತಾರೆ. ಕುಲ ಮತ್ತು ಬಂಧುತ್ವಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡುತ್ತಾರೆ.

- **ಹುಟ್ಟು ಮತ್ತು ಸಾವು ನಡುವಿನ ಆಚರಣೆಗಳು**

ಹೊಸಪೇಟೆಯ ಸ್ಲಂ ನಗರಗಳಲ್ಲಿ ಪ್ರತಿಯೊಂದು ಸಮುದಾಯವು ತನ್ನದೇ ಆದ ವಿಶಿಷ್ಟತೆಯನ್ನು ಒಳಗೊಂಡಿರುತ್ತದೆ. ಆ ವೈಶಿಷ್ಟ್ಯತೆಯಿಂದಲೇ ಗುರುತಿಸಿಕೊಂಡಿರುತ್ತದೆ. ಸಮುದಾಯಗಳು ಹಲವಾರು ಆಚರಣೆಗಳನ್ನು ಒಳಗೊಂಡಿದೆ. ಅದರಲ್ಲಿ ಹುಟ್ಟು ಮತ್ತು ಸಾವು ನಡುವಿನ ಆಚರಣೆಗಳು. ಆಯಾ ಸಮುದಾಯಗಳಿಗೆ ತಕ್ಕಂತೆ ಬೇರೆ ಬೇರೆ ಸಮುದಾಯಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಆಚರಣೆಗಳು ನಡೆಯುತ್ತವೆ. ವಿವಾಹ, ಹೆರಿಗೆ, ಬಾಣಂತಿತನ, ಋತುಮತಿ, ಹಿರಿಯರ ಪೂಜೆ, ನಿಸರ್ಗ ಸಂಬಂಧಿ ಆಚರಣೆಗಳು ಹಾಗೂ ಇನ್ನಿತರ ಹಲವಾರು ರೀತಿಯ ಆಚರಣೆಯಲ್ಲಿ ವಿಶಿಷ್ಟತೆಯನ್ನು ಹೊಂದಿದ್ದಾರೆ.

- **ಜನನ**

ವಿವಾಹದ ಪ್ರಮುಖ ಉದ್ದೇಶವೆಂದರೆ ಲೈಂಗಿಕ ಅಪೇಕ್ಷೆಯ ಪೂರೈಕೆ ಮತ್ತು ಸಂತತಿಯನ್ನು ನೆಲೆಗೊಳಿಸುವುದು. ಸಂತತಿಯು ದೇವರು ದಯಪಾಲಿಸುವ ವರ ಎಂದು ನಂಬುತ್ತಾರೆ. ಮದುವೆಯಾದ ನಂತರ ಪ್ರತಿಯೊಬ್ಬರೂ ಸಂತತಿ ಮುಂದುವರೆಯುವ ಹೆಬ್ಬಯಕೆಯನ್ನು ಹೊಂದಿರುತ್ತಾರೆ. ಗರ್ಭಿಣಿಯಾಗುವುದನ್ನು ಕುಟುಂಬವು ಕಾತುರದಿಂದ ಕಾಯುತ್ತಿರುತ್ತದೆ. ಮಕ್ಕಳನ್ನು ಪಡೆಯುವುದು ಪುಣ್ಯದ ಫಲ. ಫಲವಂತಿಕೆ ಎನ್ನುವುದು ಎಲ್ಲರಿಗೂ ಸಿಗುವುದಿಲ್ಲ. ಅದು ದೊರೆತಾಗ ಅಥವಾ ತಾಯ್ತನದ ಭಾಗ್ಯ ದೊರೆತಾಗ ಮಾತ್ರ ಹೆಣ್ಣಿನ ಜೀವನ ಸಾರ್ಥಕವಾಗುತ್ತದೆ

- **ನಾಮಕರಣ**

ಮುಗುವನ್ನು ತೊಟ್ಟಿಲ್ಲಿ ಹಾಕುವುದಕ್ಕೆ ನಾಮಕರಣ ಅಥವಾ ಹೆಸರಿಡುವುದು ಎಂದು ಕರೆಯಲಾಗುತ್ತದೆ. ಇವರಲ್ಲಿ ಹೆಣ್ಣು ಮಗುವೆಂದರೆ ಆಲಸ್ಯ ಎಂಬುವುದು ಹಿಂದಿನ ಕಾಲದಲ್ಲಿ ಇತ್ತು.

ಹೀಗಿನ ಒಂದು ಜನ ಸಮುದಾಯಕ್ಕೆ ಹೆಣ್ಣಾಗಲಿ ಗಂಡಾಗಲಿ ಚೆನ್ನಾಗಿ ಆದರೆ ಸಾಕು ಎನ್ನುವ ಅಭಿಪ್ರಾಯವನ್ನು ನೀಡಿದ್ದಾರೆ.

ಹೆರಿಗೆಯಾದ ಹನ್ನೊಂದನೆಯ ದಿನಕ್ಕೆ ಪಂಚಗವ್ಯವನ್ನು ತಂದು ಮನೆಯಲ್ಲೆಲ್ಲಾ ಸಿಂಪಡಿಸಲಾಗುತ್ತದೆ. ಪಂಚಗವ್ಯವನ್ನು ಬಾಣಂತಿ ಸೇರಿದಂತೆ ಮನೆಯವರೆಲ್ಲಾ ಸೇವಿಸಿ ಶುದ್ಧಿಯನ್ನು ಪಡೆದುಕೊಳ್ಳುತ್ತಾರೆ. ನಂತರ ತಾಯಿ ಮತ್ತು ಮಗುವನ್ನು ಮನೆಯೊಳಕ್ಕೆ ಕರೆದುಕೊಳ್ಳುತ್ತಾರೆ. ಮರನೆಯ ದಿನ ಅಂದರೆ ಮಗು ಹುಟ್ಟಿದ ಹನ್ನೆರಡನೆಯ ದಿನಕ್ಕೆ ನಾಮಕರಣ ಕಾರ್ಯವನ್ನು ಹಮ್ಮಿಕೊಳ್ಳುತ್ತಾರೆ. ಈ ಕಾರ್ಯವನ್ನು ಮಾಡುವುದಕ್ಕಿಂತ ಪೂರ್ವದಲ್ಲಿ ಹಿರಿಯರನ್ನು ಪೂಜಿಸಿ. ಮಗುವನ್ನು ತೊಟ್ಟಿಲಿಗೆ ಹಾಕಲಾಗುತ್ತದೆ. ಮನೆಯ ಒಳಗಡೆಯೇ ನಾಮಕರಣ ಶಾಸ್ತ್ರ ನಡೆಯುತ್ತದೆ. ತಮ್ಮ ಮನೆಯಲ್ಲಿ ಸತ್ತಿರುವ ಹಿರಿಯ ವ್ಯಕ್ತಿಗಳ ಹೆಸರನ್ನಿಡುವುದು ಪ್ರಮುಖವಾಗಿ ಇವರ ಆಚರಣೆಯಲ್ಲಿದೆ. ಹಿಂದೂ, ಮುಸ್ಲಿಂ, ಕ್ರೈಸ್ತ ಧರ್ಮದವರು ತಮ್ಮ ತಮ್ಮ ಧರ್ಮಗಳಿಗೆ ಸಂಬಂಧಿಸಿದ ಹೆಸರುಗಳನ್ನು ಇಡುತ್ತಾರೆ.

- **ಜವುಳ**

ಈ ಆಚರಣೆಯಲ್ಲಿ ಸೋದರಮಾವ ಪ್ರಮುಖ ಪಾತ್ರವಹಿಸುತ್ತಾನೆ. ಮಗುವಿಗೆ ಒಂದು ವರ್ಷ ತುಂಬಿದಾಗ, ಸೋದರಮಾವನನ್ನು ಕರೆಯಿಸಿ ಆಹಾರವನ್ನು ಸಿದ್ದ ಮಾಡಲಾಗುತ್ತದೆ. ಆಗ ಹಿರಿಯರಿಗೆ ನೈವೇದ್ಯ ಮಾಡಿ, ಸೋದರಮಾವನ ಮುಖಾಂತರ ಮಗುವಿಗೆ ಮೊದಲ ಬಾರಿಗೆ ಊಟ ಮಾಡಿಸಲಾಗುತ್ತದೆ. ಅಂದಿನಿಂದ ಮಗುವಿಗೆ ಆಹಾರವನ್ನು ತಿನ್ನಿಸಲು ಪ್ರಾರಂಭಿಸಲಾಗುತ್ತದೆ. ಈ ಸಂದರ್ಭದಲ್ಲಿ ತಮ್ಮ ಯೋಗ್ಯತಾನುಸಾರ ಮಗುವಿನ ಮನೆಯವರು ಸೋದರಮಾವನಿಗೆ ಉಡುಗೊರೆಯನ್ನು ನೀಡುತ್ತಾರೆ. ಮಗುವಿನ ಜವುಳ ಕಾರ್ಯಕ್ರಮ ತಂದೆಯ ಮನೆಯಲ್ಲಿಯೇ ನಡೆಯುತ್ತದೆ. ಮಗು ಸ್ವಲ್ಪ ದೊಡ್ಡದಾದ ಮೇಲೆ ಜವುಳ ಕಾರ್ಯಕ್ರಮ ಜರುಗುತ್ತದೆ. ಇವರಲ್ಲಿ ಮಗುವಿಗೆ ಮೂರು ವರ್ಷದಿಂದ ಎಂಟು ವರ್ಷದ ಒಳಗೆ ಜವುಳ ತೆಗೆಯುವ ಕಾರ್ಯಕ್ರಮ ನಡೆಯುತ್ತದೆ.

- **ಋತುಮತಿ**

ಮಗು ಜನ್ಮತಾಳಿದ ನಂತರ ಹಂತ ಹಂತವಾಗಿ ಬೆಳೆಯುತ್ತಾ ಹೋಗುತ್ತದೆ. ಹೀಗೆ ಬೆಳೆಯುತ್ತಾ ಹೋದಂತೆಲ್ಲಾ ಹಲವಾರು ಆಚರಣೆಗಳು ಆಚರಿಸಲ್ಪಡುತ್ತವೆ. ಅವುಗಳೆಂದರೆ ನಾಮಕರಣ, ಜವುಳ, ಋತುಮತಿ ಇತ್ಯಾದಿಗಳು. ಹೆಣ್ಣು ಋತುಮತಿಯಾದಾಗ ಮೈಲಿಗೆಯೆಂದು ಭಾವಿಸಲಾಗುತ್ತದೆ. "ಹೆಣ್ಣು ಋತುಮತಿಯಾಗುವುದು ಪ್ರಾಕೃತಿಕ ಸಹಜ ನಿಯಮ. ಒಮ್ಮೆ ಹೆಣ್ಣು ಋತುಮತಿಯಾದ ಮೇಲೆ ಮಧ್ಯ ವಯಸ್ಸಿನಲ್ಲಿ ಆಕೆಯ ಋತುಚಕ್ರ ಸ್ಥಗಿತಗೊಳ್ಳುವವರೆಗಿನ ಘಟ್ಟವನ್ನು ಫಲವಂತಿಕೆಯ ಕಾಲ ಎಂದು ಗುರುತಿಸುವುದು. ಹೆಣ್ಣು ಋತುಮತಿಯಾದಾಗ ತನ್ನ ಬದುಕಿನಲ್ಲಿ ಮೊಟ್ಟ ಮೊದಲ ಬಾರಿಗೆ ಜೈವಿಕ ಬದಲಾವಣೆಯಾಗುತ್ತಿರುವುದನ್ನು ಅನುಭವಿಸುತ್ತಾಳೆ"

ಹೆಣ್ಣು ಋತುಮತಿಯಾದರೆ ತಾಯ್ತನದ ಸುಖವನ್ನು ಪಡೆಯಲು ಅರ್ಹತೆಯನ್ನು ಪಡೆದಂತೆ. ಹೆಣ್ಣಿಗೆ ತಾಯ್ತನದ ಸುಖವನ್ನು ಪಡೆಯಲು ಪ್ರಕೃತಿ ನೀಡಿದ ಪ್ರಮುಖ ಕೊಡುಗೆಯಾಗಿದೆ. ಎಲ್ಲ ಸಮುದಾಯದಲ್ಲಿ ಈ ಒಂದು ಕಾರ್ಯಕ್ರಮವನ್ನು ಒಂದೇ ರೀತಿಯಲ್ಲಿ ಆಚರಣೆಯನ್ನು ಮಾಡುವುದಿಲ್ಲ. ಆಯಾ ಸಮುದಾಯಗಳಿಗೆ ತಕ್ಕಂತೆ ಆಚರಣೆಯನ್ನು ಮಾಡುತ್ತಾರೆ.

- ವಿವಾಹ

ಭಾರತೀಯ ಸಮಾಜದಲ್ಲಿ ವಿವಾಹ ಸಂಸ್ಕಾರಕ್ಕೆ ಅತ್ಯಂತ ಮಹತ್ವವಿದೆ. ಎಲ್ಲ ಸ್ಲಂ ಸಮುದಾಯದವರಿಗೂ ಸಹ ಮದುವೆ ಎನ್ನುವುದು ವಿಶಿಷ್ಟ ಸಂಸ್ಕಾರಗಳಲ್ಲೊಂದಾಗಿದೆ. ಇವರಲ್ಲಿ ಬಾಲ್ಯ ವಿವಾಹ ಪ್ರಮುಖವಾಗಿ ಕಂಡುಬರುತ್ತಿತ್ತು. ಆದರೆ ಇಂದು ವಿವಾಹದ ಸಂಪ್ರದಾಯಗಳು ಕಡಿಮೆಯಾಗಿವೆ. ಕಾರಣ ರಿಜಿಸ್ಟರ್ ಮದುವೆಗಳು ಹೆಚ್ಚಾಗಿವೆ ಖರ್ಚು ಕಡಿಮೆಯಾಗುತ್ತದೆ ಎಂಬ ಉದ್ದೇಶದಿಂದ ಮದುವೆಯ ಸಂಪ್ರದಾಯಗಳು ಕಡಿಮೆಯಾಗಿವೆ.

ಹಿಂದಿನ ಮದುವೆಗೂ ಮತ್ತು ಇಂದಿನ ಮದುವೆಗೂ ತುಂಬಾನೆ ವ್ಯತ್ಯಾಸವಿದೆ. ಹಿಂದಿನ ಮದುವೆಗಳು ಏಳು ಮತ್ತು ನಾಲ್ಕು ದಿನಗಳವರೆಗೆ ಮದುವೆ ನಡೆಯಲಿದೆ. ಆದರೆ ಇಂದಿನ ದಿನಗಳಲ್ಲಿ ಕೆಲವೊಂದು ಸಮುದಾಯಗಳಲ್ಲಿ ಕೆಲಯೊಬ್ಬರು ಮದುವೆಗಳು ಗೊತ್ತೇ ಆಗಲ್ಲ. ಇವರ ಸಂಸಾರದಲ್ಲಿ ಗಂಡ-ಹೆಂಡತಿಯ ಮಧ್ಯೆ ಬಿರುಕು ಮೂಡಿದರೆ, ಅವರ ದಾಂಪತ್ಯ ಅನ್ಯೋನ್ಯವಾಗಿರದಿದ್ದರೆ ಸುಲಭವಾಗಿ ವಿಚ್ಛೇಧನೆಯನ್ನು ಪಡೆಯಬಹುದಾಗಿದೆ. ವಿವಾಹ ವಿಚ್ಛೇಧನೆ ಪಡೆಯುವುದು ಈ ಎಲ್ಲ ಸಮುದಾಯಗಳಲ್ಲಿ ಸಾಮಾನ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಪ್ರೇಮ ವಿವಾಹಗಳು, ನೊಂದಣಿ ವಿವಾಹಗಳು, ಕೇಲವು ಕಡೆ ಕಂಡುಬರುತ್ತಿವೆ ಎನ್ನುವ ಅಭಿಪ್ರಾಯವನ್ನು ಈ ಸ್ಲಂನ ಹಿರಿಯರು ತಿಳಿಸಿಕೊಟ್ಟಿದ್ದಾರೆ.

- ಸೀಮಂತ

ವಿವಾಹದ ನಂತರ ಗಂಡ – ಹೆಂಡತಿಯರ ಸಮಾಗಮನದ ಫಲವಾಗಿ ಸಂತಾನೋತ್ಪತ್ತಿ ಕಾರ್ಯ ಪ್ರಾರಂಭವಾಗುತ್ತದೆ. ಹೆಣ್ಣು ಗರ್ಭಿಣಿಯಾದಾದ ಮಾಡುವ ಆಚರಣೆಯನ್ನು ಸೀಮಂತ ಕಾರ್ಯ ಎನ್ನಲಾಗುತ್ತದೆ. ಹೆಣ್ಣು ಗರ್ಭವತಿಯಾದ ಮೂರರಿಂದ ನಾಲ್ಕನೇ ತಿಂಗಳಿನಲ್ಲಿ ದಾರಿಬುತ್ತಿಯನ್ನು ನೀಡಲಾಗುತ್ತದೆ. ಇದನ್ನು ಕಳ್ಳಬುತ್ತಿ, ಕಳ್ಳಕುಬುಸ ಎಂತಲೂ ಕರೆಯಲಾಗುತ್ತದೆ. ಈ ಆಚರಣೆಯನ್ನು ಮಾಡುವವರಿಗೆ ತಮ್ಮ ಊರಿನ ಹಳ್ಳವನ್ನು ಅಂದರೆ ಕಕ್ಷೆಯನ್ನು ದಾಟುವುದಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದ ಗರ್ಭಿಣಿಯ ತವರು ಮನೆಯವರು ಮೂರರಿಂದ ನಾಲ್ಕನೇ ತಿಂಗಳಿನಲ್ಲಿ ಕೇಲವು ಬಗೆಯ ತಿಂಡಿ-ತಿನ್ನಿಸುಗಳನ್ನು ಮಾಡಿಕೊಂಡು ಬರುತ್ತಾರೆ.

ಇದು ಸರಳವಾಗಿ ಮನೆ-ಮನೆಯವರಲ್ಲಿಯೇ ನಡೆಯುತ್ತದೆ. ಇದನ್ನು ಮಾಡುವುದಕ್ಕೆ ಮುಂಚೆಯೇ ಗಂಡನ ಮನೆಯವರು ಹೆಣ್ಣಿಗೆ ತಿಂಗಳು ತುಂಬಿಸ ಸುದ್ದಿಯನ್ನು ಅವಳ ತವರು ಮನೆಯವರಿಗೆ ಮುಟ್ಟಿಸುತ್ತಾರೆ. ಆಗ ಹೆಣ್ಣಿನ ತವರುಮನೆಯವರು ಹೊಸ ಸೀರೆ, ಕುಪ್ಪಸ, ಹೂವು, ಹಣ್ಣು, ಕೇಲವು ಬಗೆಯ ತಿನ್ನಿಸುಗಳನ್ನು ತೆಗೆದುಕೊಂಡು ಬರುತ್ತಾರೆ. ನಂತರ ಗರ್ಭಿಣಿಗೆ ಆರು ಅಥವಾ ಎಂಟು ತಿಂಗಳು ತುಂಬಿದಾಗ ಸೀಮಂತ ಕಾರ್ಯವನ್ನು ಮಾಡಲಾಗುತ್ತದೆ. ಗರ್ಭಣಿಗೆ ಗಂಡನ ಮನೆಯಲ್ಲಿ ಸೀಮಂತ ಕಾರ್ಯವನ್ನು ನೇರವೇರಿಸಲಾಗುತ್ತದೆ.

- **ಶವ ಸಂಸ್ಕಾರ**

ಮಾನವ ಹುಟ್ಟಿನಿಂದ ಮರಣದವರೆಗೆ ಹಲವಾರು ಸಂಸ್ಕಾರಗಳಿವೆ ಒಳಪಡುತ್ತಾನೆ. ಸತ್ತ ನಂತರವೂ ಹಲವಾರು ಸಂಸ್ಕಾರಗಳು ನಡೆಯುವುದನ್ನು ನಾವು ಸುಲಭವಾಗಿ ಗಮನಿಸಬಹುದಾಗಿದೆ. ಸಾವಿನ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಎಲ್ಲಾ ಕಡೆ ಒಂದೇ ರೀತಿ ಇರುತ್ತವೆ ಎನ್ನುವಂತಿಲ್ಲ. ಇದು ಕಾಲದಿಂದ ಕಾಲಕ್ಕೆ ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆಯನ್ನು ಹೊಂದಿರುತ್ತದೆ. ಏನೇ ಭಿನ್ನತೆಯಿದ್ದರೂ ಅದು ಸೂತಕವಾಗಿರುತ್ತದೆ.

ಎಲ್ಲ ಸಮುದಾಯದಲ್ಲಿ ಶವ ಸಂಸ್ಕಾರದಲ್ಲಿ ಎಲ್ಲರಿಗೂ ಒಂದೇ ರೀತಿಯಾದ ಚಟ್ಟವನ್ನು ತಯಾರಿಸಲಾಗುತ್ತದೆ. ಇಲ್ಲಿ ವಯಸ್ಕ ಅಥವಾ ಸಣ್ಣವ ಎನ್ನುವ ಭಿನ್ನ ವ್ಯವಸ್ಥೆಯಿಲ್ಲ. ವ್ಯಕ್ತಿಯು ಮರಣ ಹೊಂದಿದ ನಂತರ ಬಿದಿರು ಮತ್ತು ತೆಂಗಿನ ಗರಿಗಳಿಂದ ಚಟ್ಟವನ್ನು ತಯಾರಿಸಲಾಗುತ್ತದೆ. ಮೃತ ಹೆಣವನ್ನು ಬಹಳ ಹೊತ್ತಿನವರೆಗೆ ಇಟ್ಟುಕೊಳ್ಳುವುದಿಲ್ಲ. ರಾತ್ರಿ ಸಮಯದಲ್ಲಿ ಸತ್ತರೆ ಮನೆಯ ಮುಂದೆ ಬೆಂಕಿ ಹಾಕಿ ಬೆಳಿಗ್ಗೆ ಶವ ಸಂಸ್ಕಾರ ಮಾಡುತ್ತಾರೆ. ಸತ್ತ ವ್ಯಕ್ತಿಯ ಹಿರಿಯ ಮಗ ಸ್ನಾನ ಮಾಡಿಸುತ್ತಾನೆ. ಶವ ಸಂಸ್ಕಾರದಲ್ಲಿಯೂ ಸಹ ಹಿರಿಯ ಮಗ ಪ್ರಮುಖ ಪಾತ್ರ ವಹಿಸುತ್ತಾನೆ. ವ್ಯಕ್ತಿಯು ಮರಣ ಹೊಂದಿದ ಮೂರು ತಾಸಿನ ಒಳಗಾಗಿ ಶವ ಸಂಸ್ಕಾರ ಮಾಡುವುದು ಕಂಡುಬರುತ್ತಿತ್ತು. ಆದರೆ ಇಂದು ಸಂಬಂಧಿಗಳು ಬರುವವರೆಗೆ ಕಾಯಲಾಗುತ್ತದೆ. ಆದರೂ ಸಂಬಂಧಿಗಳು ಬಹುಬೇಗನೇ ಬಂದು ಸೇರುತ್ತಾರೆ. ತಮ್ಮವರೆಲ್ಲಾ ಬಂದಿದ್ದಾರೆ ಎಂದು ತಿಳಿದ ಕೂಡಲೇ ಶವ ಸಂಸ್ಕಾರಕ್ಕೆ ಅಣಿಮಾಡಲಾಗುತ್ತದೆ.

- **ಕೃಷಿ ಸಂಬಂಧಿ ಆಚರಣೆಗಳು**

ಸ್ಲಂ ನಿವಾಸಿಗರಲ್ಲಿ ಕೆಲವರು ಕೃಷಿಯಲ್ಲಿ ತೊಡಗಿದ್ದಾರೆ. ಇನ್ನು ಅಧಿಕ ಸಂಖ್ಯೆಯ ಜನರು ಕೂಲಿಯನ್ನು ಮಾಡುತ್ತಿದ್ದಾರೆ. ಮುಖ್ಯವಾಗಿ ಕೃಷಿಯನ್ನು ಅವಲಂಬಿಸಿದ ಜನರು ಹೊಟ್ಟೆಯನ್ನು ಹೊರೆಯುತ್ತಿದ್ದಾರೆ. ಕೃಷಿ ಕೂಲಿಗಳಾಗಿ ಮತ್ತು ಅಲ್ಪಸ್ವಲ್ಪ ಅತಿಕ್ರಮಣ ಭೂಮಿಯಲ್ಲಿ ಕೃಷಿಯನ್ನು ನಂಬಿಕೊಂಡು ಜೀವನವನ್ನು ನಿರ್ವಹಿಸುತ್ತಿದ್ದಾರೆ. ಕೃಷಿಗೆ ಸಂಬಂಧಿಸಿದಂತೆ ಹಲವಾರು ಆಚರಣೆಗಳನ್ನು

ರೂಢಿಸಿಕೊಂಡಿದ್ದಾರೆ. ಭೂಮಿಯನ್ನು ಉಳುಮೆ ಮಾಡುವಾಗ, ಬಿತ್ತುವಾಗ, ಬೆಳೆಗಳು ಬೆಳೆದು ನಿಂತಾಗ, ಫಲವನ್ನು ಕೊಯ್ಯುವಾಗ, ರಾಶಿ ಮಾಡುವಾಗ, ಮತ್ತು ಮಾಡಿದ ನಂತರ ಹಲವಾರು ರೀತಿಯಲ್ಲಿ ಪೂಜಿಸುವ ಸಂಪ್ರದಾಯ ಇವರಲ್ಲಿ ಕಂಡುಬರುತ್ತದೆ.

## 3.4 ಆರೋಗ್ಯ ಮತ್ತು ಆಹಾರ ಪದ್ಧತಿ

ಪ್ರಾಥಮಿಕ ಆರೋಗ್ಯ ಕೇಂದ್ರಗಳ ಕೊರತೆ ಹೊಸಪೇಟೆಯ ಸ್ಲಂ ಜನರಿಗೆ ಶೇ 50.8 ರಷ್ಟಿದೆ. ಶೇ.49.2 ರಷ್ಟು ಜನರಿಗೆ ಪ್ರಾಥಮಿಕ ಆರೋಗ್ಯ ಕೇಂದ್ರದ ಲಭ್ಯತೆಯಿದೆಯೆಂದು ಹೇಳಲಾಗುತ್ತಿದೆಯಾದರೂ ಔಷಧಿ ಮತ್ತು ವೈದ್ಯರ ಕೊರತೆಯಿಂದ ಇವು ನಗೆ ಪಾಟಲಿಗೆ ಈಡಾಗಿದೆ. ಶ್ರೀಮಂತರ ಬಡಾವಣೆಯ ಅಸ್ಪತ್ರೆಯ ಸ್ಥಿತಿ ಇವುಗಳಂತೆ ಇದೆಯೇ?

ಇಲ್ಲಿ ಎಲ್ಲಾ ಸ್ಲಂಗಳ ಜನರು ಕನಿಷ್ಠ ಶುಚಿತ್ವದ ಕೊರತೆಯಿಂದ, ನೈರ್ಮಲ್ಯದ ಕೊರತೆಯಿಂದ ಬಳಲುತ್ತಿದ್ದಾರೆ. ಇವರ ಅಡಿಗೆಯ ಮನೆ, ವಾಸದ ಮನೆ, ಮಲಗುವ ಕೋಣೆ, ಎಲ್ಲವೂ ಒಂದೇ ಆಗಿರುತ್ತದೆ. ಇಷ್ಟರ ಜೊತೆಗೆ ಕಸ ವಿಲೇವಾರಿಯಲ್ಲಿನ ಲೋಪದೋಷದಿಂದಾಗಿ ಚರಂಡಿ ಮತ್ತು ಒಳಚರಂಡಿಯ ಅಲಭ್ಯತೆಯಿಂದಾಗಿ ಸ್ಲಂ ಪ್ರದೇಶಗಳ ಇಲ್ಲಿ ವಾಸನೆ ಜನ ಕೇಂದ್ರಗಳಾಗಿ, ರೋಗಾಣುಗಳ ಉತ್ಪಾದಕ ಘಟಕಗಳಂತೆ ಪರಿವರ್ತನೆಗೊಂಡಿದೆ. ಈ ಬಗ್ಗೆ ಇಲ್ಲಿಯ ತನಕ ನಗರಾಡಳಿತ ಕಿಂಚಿತ್ತು ಗಮನ ಹರಿಸಿಲ್ಲ.

ಬೇರೆಲ್ಲಾ ನಗರಗಳಿಗಿಂತ ಹೊಸಪೇಟೆಯ ಸ್ಲಂ ಜನರ ಬದುಕಿನ ಸ್ಥಿತಿ ನಿಜಕ್ಕೂ ದುರ್ಬಲವಾಗಿದೆ. ಇಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಎಷ್ಟಿದೆಯೆಂದರೆ ನಿಜಕ್ಕೂ ಮಾನವ ಕುಲಕ್ಕೆ ಅವಮಾನವಾಗಿಸುವ ಮಟ್ಟದಲ್ಲಿದೆ. ಹೊಸಪೇಟೆ ನಗರದಲ್ಲಿ ಸರ್ಕಾರಿ ಅಸ್ಪತ್ರೆ ಇದ್ದರೂ ಸಹ ಜನ ಖಾಸಗಿ ಅಸ್ಪತ್ರೆಗಳಿಗೆ ಹೋಗುತ್ತಿದ್ದಾರೆ. ಕಾರಣ ಸರಿಯಾದ ಚಿಕಿತ್ಸೆ ನೀಡದಿರುವುದು. ಸರಿಯಾದ ಸಿಬಂದ್ದಿ ವ್ಯವಸ್ಥೆ ಇಲ್ಲ ಇರುವುದು. ಇಲ್ಲಿನ ವೈದ್ಯರು ಬೇಜವಾಬ್ದಾರಿಯಿಂದ ಚಿಕಿತ್ಸೆ ನೀಡುವುದ್ದರಿಂದ ಇಲ್ಲಿನ ಎಲ್ಲ ನಾಗರಿಕರು ಖಾಸಗಿ ದಾವಖಾನೆಗಳಿಗೆ ಹೆಚ್ಚಾಗಿ ಹೋಗುತ್ತಾರೆ.

- **ಆಹಾರ ಪದ್ಧತಿ**

ಪ್ರತಿಯೊಂದು ಸಮುದಾಯವು ತನ್ನದೇ ಆದ ವಿಶಿಷ್ಟ ಆಹಾರ ಪದ್ಧತಿಯನ್ನು ಒಳಗೊಂಡಿರುತ್ತದೆ. ಅದರಲ್ಲಿಯೂ ಮುಖ್ಯವಾಗಿ ಸ್ಲಂ ಸಮುದಾಯಗಳು ವಿಶಿಷ್ಟವಾದ ಆಹಾರ ಪದ್ಧತಿಯನ್ನು ಅಳವಡಿಸಿಕೊಂಡಿರುತ್ತದೆ. ಕಾಲ ಬದಲಾದಂತೆಲ್ಲಾ ಸ್ಲಂ ಜನರ ಆಹಾರ ಪದ್ಧತಿಯಲ್ಲಿಯೂ ಬದಲಾವಣೆಯಾಗುತ್ತದೆ.

ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಹಾಗೂ ಸಿಖ್ ಧರ್ಮಗಳಲ್ಲಿ ಹಂಚಿಹೋಗಿದ್ದಾರೆ. ಈ ಎಲ್ಲ ಧರ್ಮದವರು ಮಾಂಸಾಹಾರ ಮತ್ತು ಸಸ್ಯಹಾರ ಎರಡನ್ನೂ ಬಳಸುತ್ತಾರೆ. ಯಾರು ಯಾವ

ಮುದಾಯದವರ ಮನೆಯಲ್ಲಿ ಬೇಕಾದರೂ ಊಟ ಮಾಡಬಹುದು. ಊಟ ಮಾಡುವುದರಲ್ಲಿ ಯಾವುದೇ ನಿರ್ಬಂಧವಿಲ್ಲ. ಕಾಡಾಡಿಗಳಾದ ಇವರು ಮೂಲತಃ ಮಾಂಸಾಹಾರವನ್ನೇ ಹೆಚ್ಚಾಗಿ ಳಸುತ್ತಿದ್ದರು. ಬೇಟೆ ನಿಷೇಧದ ಹಿನ್ನೆಲೆಯಿಂದಾಗಿ ಮಾಂಸಾಹಾರ ಕಡಿಮೆಯಾಗಿದೆ.

ಇತ್ತೀಚೆಗೆ ಕೆಲವು ಕುಟುಂಬಗಳು ದನಕರುಗಳನ್ನು ಸಾಕುವುದನ್ನು ರೂಢಿಸಿಕೊಂಡಿದ್ದಾರೆ. ದನಕರುಗಳು ಇದ್ದವರ ಮನೆಯಲ್ಲಿ ಹೈನಿಗೆ ಕೊರತೆಯಿಲ್ಲ. ಆದರೆ ದನ ಸಾಕಾಣಿಕೆ ಮಾಡದವರ ಮನೆಯಲ್ಲಿ ಹಾಲು ಇಲ್ಲದ ಹಾಲು ಇಲ್ಲದ ಚಹ ಸಾಮಾನ್ಯವಾಗಿರುತ್ತದೆ. ಕೆಲವರು ಕುರಿಯ ಹಾಲನ್ನೂ ಸಹ ಚಹಾಕ್ಕೆ ಬಳಸುವುದುಂಟು. ಯಾರಾದರೂ ಮನೆಯಲ್ಲಿ ಹಾಸಿಗೆ ಹಿಡಿದಾಗ ಹಾಲು, ಮೊಸರು, ಬೆಣ್ಣೆ, ತುಪ್ಪ ಬೇಕಾದರೆ ತಮ್ಮ ಧಣಿಗಳ ಮನೆಯಲ್ಲಿ ಕಾಡಿಬೇಡಿ ತರುತ್ತಾರೆ. ಆದರೆ ಇಂದು ಸಮುದಾಯದಲ್ಲಿ ಕೆಲವರು ದನ ಮತ್ತು ಕುರಿಗಳನ್ನು ಸಾಕಿಕೊಂಡಿರುವುದರಿಂದ ಹೈನಿನ ಪರಿಸ್ಥಿತಿಯಲ್ಲಿ ಸ್ವಲ್ಪ ಸುಧಾರಿಸಿದೆ ಎಂದು ಹೇಳಬಹುದು. ಹೀಗೆ ಹೊಸಪೇಟೆ ಸ್ಲಂ ನಗರಗಳಲ್ಲಿ ಆಹಾರ ಪದ್ಧತಿಯಲ್ಲಿ ಆಯಾ ಸಮುದಾಯಗಳಿಗೆ ಸಕ್ಕಂತೆ ಅವರ ಆಹಾರ ಪದ್ಧತಿಯನ್ನು ಹೊಂದಿದೆ. ಎಲ್ಲ ಸಮುದಾಯಗಳಲ್ಲಿ ಮಾಂಸಾಹಾರ ಮತ್ತು ಸಸ್ಯಹಾರ ಪದ್ಧತಿಯನ್ನು ಒಳಗೊಂಡಿದೆ.

## 3.5 ದೈವಾರಾಧನೆ

ಹೊಸಪೇಟೆಯಲ್ಲಿನ ಕೊಳಗೇರಿ ನಿವಾಸಿಗರು ಹಿಂದಿನ ಕಾಲದಿಂದಲೂ ಇಂದಿನ ವರೆಗೂ ದೈವವನ್ನು ಆರಾಧಿಸುತ್ತಲೇ ಬಂದಿದ್ದಾರೆ. ದೈವವನ್ನು ಧರ್ಮವೆಂದು ನಂಬಿದ್ದಾರೆ. ಧರ್ಮ ಮತು ದೇವರು ಒಂದೇ ನಾಣ್ಯದ ಎರಡು ಮುಖಗಳು. ಒಂದನ್ನು ಬಿಟ್ಟು ಮತ್ತೊಂದು ಕಂಡು ಬರುವುದಿಲ್ಲ. ಧರ್ಮವು ಮಾನವನಿಗೆ ಸಹಜವಾಗಿ ಅಂಟಿಕೊಂಡು ಬಂದಿರುತ್ತದೆ.

ಸ್ಲಂ ನಿವಾಸಿಗರು ಅನೇಕ ಸಮುದಾಯದವರು ಅನೇಕ ದೇವರುಗಳನ್ನು ಆರಾಧಿಸುತ್ತಾರೆ. ಹಿಂದೂಗಳು ಈಶ್ವರ, ಗಣಪತಿ, ಕೃಷ್ಣ, ಮಂಜುನಾಥ, ನರಸಿಂಹ, ತಿರುಪತಿ, ಗೌರಿ, ಲಕ್ಷ್ಮಿ, ಮಾರೆಮ್ಮ, ಯಲ್ಲಮ್ಮ, ಚೌಡಮ್ಮ, ಮುಂತಾದ ದೇವರುಗಳನ್ನು ಆರಾಧಿಸುತ್ತಾರೆ. ಮುಸ್ಲಿಂರು ಅಲ್ಲಾ, ಬಾಬಾ, ಬಾಬಾ ಬುಡನ್, ಬಾಬಾ ಗೋರಿ, ದಸ್ತಗಿರಿ ಶಾವಲಿ, ದವಲ್‌ಸಾಬ್, ಗೋರಿಸಾಬ್, ಹಜರತ್, ಹಸೇ ಹುಸೇನ್, ಹುಸೇನ್ ಪೀರ್, ಮಹಮ್ಮದ್ ಪೈಗಂಬರ, ಮೌಲಾಲಿ ಮುಂತಾದ ದೇವರುಗಳನ್ನು ಆರಾಧಿಸುತ್ತಾರೆ. ಕ್ರೈಸ್ತರು ಏಸು ಕ್ರಿಸ್ತನನ್ನು ಆರಾಧಿಸುತ್ತಾರೆ.

ಮಾನವರಲ್ಲಿ ಮತ್ತು ಪ್ರಾಣಿಗಳಲ್ಲಿ ಭೇದವನ್ನು ಕಲ್ಪಿಸಲು ಧರ್ಮದಿಂದಲೂ ಸಾಧ್ಯವಾಗುತ್ತದೆ. ಪ್ರಕೃತಿಯ ಮಡಿಲಿನಲ್ಲಿ ಸಹಜವಾಗಿಯೇ ಬೆಳೆದು ಬಂದಿರುವ ಮಾನವ ಜೀವಿಗಳು ತಮಗಿಂತಲೂ ಅಗೋಚರವಾದ ಶಕ್ತಿಯನ್ನು ಸ್ತುಂದಿಸುತ್ತಲೇ ಬಂದಿದ್ದಾರೆ. ನೈಸರ್ಗಿಕ ಗಂಡಾಂತರ, ಕ್ರೂರ ಪ್ರಾಣಿಗಳಿಂದ ಹಿಂಸೆಗೊಳಗಾಗುವುದು, ಭೂಕಂಪ, ಜ್ವಾಲಾಮುಖಿ, ಬಿರುಗಾಳಿ, ಸಾಂಕ್ರಾಮಿಕ ರೋಗಗಳು, ಬರಗಾಲ,

ಕ್ಷಾಮ ಮುಂತಾದವುಗಳನ್ನು ಸಹಜವಾಗಿ ಎದುರಿಸುವ ಪ್ರೇರಣೆ ಶಕ್ತಿ ಮೊದಲಾವುಗಳನ್ನು ಹೊಂದಿರುವ ಮಾನವ ಜೀವಿಗಳ ಹಿಂದೆ ಯಾವುದೇ ಒಂದು ಅಮಾನುಷ ಶಕ್ತಿಯನ್ನು ನೋಡುತ್ತಾ ಕೊಳಗೇರಿ ನಿವಾಸಿಗರು ಬಂದಿದ್ದಾರೆ. ನಿಸರ್ಗದಲ್ಲಾಗುತ್ತಿರುವ ಪ್ರತಿಯೊಂದು ಆಗುಹೋಗುಗಳಿಗೆ ಅಲೌಕಿಕ ಶಕ್ತಿಗಳೇ ಕಾರಣವೆಂದು ಮಾನವನು ನಂಬಿರುತ್ತಾನೆ.

ಈ ಅಪಾರವಾದ ನಂಬಿಕೆಯೇ ಧರ್ಮವೆಂದು ಹೇಳಬಹುದು. ಧಾರ್ಮಿಕ ಮನೋಭಾವನೆಯು ಒಮ್ಮೆ ಪ್ರೇತ ರೂಪದಲ್ಲಿರಬಹುದು. ಇಲ್ಲವೆ ಶಕ್ತಿ ರೂಪದಲ್ಲಿರಬಹುದು. ಈ ಎರಡು ಶಕ್ತಿಗಳು ಸಾಕ್ಷಾತ್ಕಾರಕ್ಕಾಗಿ ಮಾನವ ಜೀವಿಗಳು ತಮ್ಮ ಸರ್ವಸ್ವವನ್ನು ಮುಡಿಪಾಗಿ ಇಡುತ್ತಾರೆ. ದೈವಶಕ್ತಿಯ ಕರಣೆಯಿದ್ದಾಗ ಮಾತ್ರ ಈ ಜಗತ್ತಿನಲ್ಲಿ ನಾವೆಲ್ಲರೂ ಸುಖಿಗಳಾಗಿ ಬಾಳುವುದಕ್ಕೆ ಸಾಧ್ಯವೆಂಬ ಕಲ್ಪನೆ ಇವರಲ್ಲಿರುತ್ತದೆ. ಮಾನವ ಈ ಕ್ಷಣಿಕ ಸಂಸಾರವನ್ನು ತೊರೆದು ಸುಖ, ದುಃಖ, ಹುಟ್ಟು, ಸಾವು, ಮುಂತಾದವುಗಳಿಂದ ವಿಮುಕ್ತನಾಗಬೇಕೆಂಬ ಆಸೆಯಿಂದ ಅಲೌಕಿಕ ಶಕ್ತಿಯ ಕಡೆಗೆ ಉತ್ಕಟವಾದ ಇಚ್ಛೆಯಿಂದ ಅವನಲ್ಲಿ ಭಯ, ಭಕ್ತಿ, ನಂಬಿಕೆ ಕ್ರಿಯಾವಿಧಗಳನ್ನು ಆಚರಿಸುತ್ತಲೇ ಬಂದಿದ್ದಾನೆ.

### 3.6 ಉಡುಗೆ – ತೊಡುಗೆಗಳು

ಸ್ಲಂ ನಿವಾಸಿಗರು ಉಡುಗೆ-ತೊಡುಗೆಗಳಲ್ಲಿ ಅವರವರ ಸಮುದಾಯಗಳಿಗೆ ತಕ್ಕಂತೆ ಉಡುಗೆ – ತೊಡುಗೆಗಳು ಒಳಗೊಂಡಿದ್ದಾರೆ. ಸ್ತ್ರೀ-ಪುರುಷರ ಉಡುಗೆ ತೊಡುಗೆಗಳು ಮೇಲ್ಜಾತಿಯವರ ಉಡುಗೆಗಳಂತೆ ಕಂಡು ಬರುತ್ತವೆ. ಹೆಂಗಸರು ಸೀರೆ, ಕುಪ್ಪಸ, ಜಂಪರ್, ಪತ್ತಲ, ಮಕ್ಕಳ ನಿಲುವಂಗಿ, ನೈಟಿ, ಪೆಟಿಕೋಟ್, ಲಂಗಾ-ಬ್ಲೌಸ್, ಚಡ್ಡಿ-ಅಂಗಿ, ಗಂಡಸರು ದೋತರ, ಅಂಗಿ, ಲಪಾಟಿ, ಪ್ಯಾಂಟು, ಟೊಪ್ಪಿಗೆ, ಟೀಷರಟ್, ಪಟಕಾ, ಟವೆಲ್, ಒಳುಡುಪು ಮುಂತಾದವನ್ನು ತೊಡುತ್ತಾರೆ. ಹಿಂದಿನ ಕಾಲದಲ್ಲಿ ಸ್ಲಂ ಜನರು ಮೇಲ್ಜಾತಿಯವರು ಉಟ್ಟ ಬಟ್ಟೆಗಳನ್ನು ಬಳಸುತ್ತಿದ್ದರಂತೆ. ಇಂದು ಕಾಲ ಬದಲಾಗಿದೆ ಆದರೂ ಕಡುಬಡವರು ಈ ರೂಢಿಯನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಕಾಲ ಬದಲಾದಂತೆ ಇವರು ವಿವಿಧ ರೀತಿಯ ಫ್ಯಾಶನ್ ಉಡುಪುಗಳನ್ನು ಧರಿಸುತ್ತಿದ್ದಾರೆ. ಅದಕ್ಕಾಗಿ ಜನಪದ ಹಾಡುಗಾರ್ತಿಯೊಬ್ಬರು ವಡವೆ ವಸ್ತ್ರದ ಬಗ್ಗೆ ಹೀಗೆ ಹೇಳುತ್ತಾರೆ. ಸ್ಲಂಗಳು ಈ ಅಭಿವೃದ್ಧಿ ಆಗುವುದ್ದರಿಂದ ಇಲ್ಲಿ ಹಿಂದಿಗಿಂತ ಇಂದಿನ ದಿನಗಳಲ್ಲಿ ಅನೇಕ ಬದಲಾವಣೆಗಳನ್ನು ಸ್ಲಂನ ಎಲ್ಲ ಸಮುದಾಯಗಳಲ್ಲಿ ಉಡುಗೆ – ತೊಡುಗೆಗಳಲ್ಲಿ ಬದಲಾಗುತ್ತಿದ್ದಾರೆ.

### ಸಮಾರೋಪ

ಪ್ರಸ್ತುತ ಮೂರನೇಯ ಅಧ್ಯಯನದಲ್ಲಿ ಕುಟುಂಬದ ಸ್ವರೂಪ, ವೈವಾಹಿಕ ಸ್ಥಿತಿ, ಕೊಳಗೇರಿ ನಿವಾಸಿಗಳ ಆಚರಣೆಗಳು, ಜನನ ಮತ್ತು ಮರಣ ನಡುವಿನ ಸಂಸ್ಕಾರಗಳು, ಕೊಳಗೇರಿ ನಿವಾಸಿಗಳ

ವಯೋಮಾನ, ಆರೋಗ್ಯ ಮತ್ತು ಆಹಾರ ಪದ್ಧತಿ, ದೈವಾರಾಧನೆ, ಉಡುಗೆ – ತೊಡುಗೆಗಳು ಮುಂತಾದ ಸಂಗತಿಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

ಬೇರೆಲ್ಲಾ ನಗರಗಳಿಗಿಂತ ಹೊಸಪೇಟೆಯ ಸ್ಲಂ ಜನರ ಬದುಕಿನ ಸ್ಥಿತಿ ನಿಜಕ್ಕೂ ದುರ್ಬಲವಾಗಿದೆ. ಇಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಎಷ್ಟಿದೆಯೆಂದರೆ ನಿಜಕ್ಕೂ ಮಾನವ ಕುಲಕ್ಕೆ ಅವಮಾನವಾಗಿಸುವ ಮಟ್ಟದಲ್ಲಿದೆ. ಹೊಸಪೇಟೆ ನಗರದಲ್ಲಿ ಸರ್ಕಾರಿ ಅಸ್ಪತ್ರೆ ಇದ್ದರೂ ಸಹ ಜನ ಖಾಸಗಿ ಅಸ್ಪತ್ರೆಗಳಿಗೆ ಹೋಗುತ್ತಿದ್ದಾರೆ. ಕಾರಣ ಸರಿಯಾದ ಚಿಕಿತ್ಸೆ ನೀಡದಿರುವುದು. ಸರಿಯಾದ ಸಿಬಂದ್ದಿ ವ್ಯವಸ್ಥೆ ಇಲ್ಲ ಇರುವುದು. ಇಲ್ಲಿನ ವೈದ್ಯರು ಬೇಜವಾಬ್ದಾರಿಯಿಂದ ಚಿಕಿತ್ಸೆ ನೀಡುವುದ್ದರಿಂದ ಇಲ್ಲಿನ ಎಲ್ಲ ನಾಗರಿಕರು ಖಾಸಗಿ ದಾವಖಿನೆಗಳಿಗೆ ಹೆಚ್ಚಾಗಿ ಹೋಗುತ್ತಾರೆ.

ಮಾನವರಲ್ಲಿ ಮತ್ತು ಪ್ರಾಣಿಗಳಲ್ಲಿ ಭೇದವನ್ನು ಕಲ್ಪಿಸಲು ಧರ್ಮದಿಂದಲೂ ಸಾಧ್ಯವಾಗುತ್ತದೆ. ಪ್ರಕೃತಿಯ ಮಡಿಲಿನಲ್ಲಿ ಸಹಜವಾಗಿಯೇ ಬೆಳೆದು ಬಂದಿರುವ ಮಾನವ ಜೀವಿಗಳು ತಮಗಿಂತಲೂ ಅಗೋಚವಾದ ಶಕ್ತಿಯನ್ನು ಸ್ಪಂದಿಸುತ್ತಲೇ ಬಂದಿದ್ದಾರೆ. ನೈಸರ್ಗಿಕ ಗಂಡಾಂತರ, ಕ್ರೂರ ಪ್ರಾಣಿಗಳಿಂದ ಹಿಂಸೆಗೊಳಗಾಗುವುದು, ಭೂಕಂಪ, ಜ್ವಾಲಾಮುಖಿ, ಬಿರುಗಾಳಿ, ಸಾಂಕ್ರಾಮಿಕ ರೋಗಗಳು, ಬರಗಾಲ, ಕ್ಷಾಮ ಮುಂತಾದವುಗಳನ್ನು ಸಹಜವಾಗಿ ಎದುರಿಸುವ ಪ್ರೇರಣೆ ಶಕ್ತಿ ಮೊದಲಾವುಗಳನ್ನು ಹೊಂದಿರುವ ಮಾನವ ಜೀವಿಗಳ ಹಿಂದೆ ಯಾವುದೇ ಒಂದು ಅಮಾನುಷ ಶಕ್ತಿಯನ್ನು ನೋಡುತ್ತಾ ಕೊಳಗೇರಿ ನಿವಾಸಿಗರು ಬಂದಿದ್ದಾರೆ. ನಿಸರ್ಗದಲ್ಲಾಗುತ್ತಿರುವ ಪ್ರತಿಯೊಂದು ಆಗುಹೋಗುಗಳಿಗೆ ಅಲೌಕಿಕ ಶಕ್ತಿಗಳೇ ಕಾರಣವೆಂದು ಮಾನವನು ನಂಬಿರುತ್ತಾನೆ.

ಸಾಮಾಜಿಕ ಜೀವನ ಮಾನವನೊಬ್ಬನಿಗೆ ಸೀಮಿತವಾದುದ್ದಲ್ಲ. ಇದು ಪ್ರಾಣಿ ಪಕ್ಷಿಗಳಿಗೂ ಸಂಬಂಧಿಸಿದೆ. ಮಾನವ ಸಮಾಜವು ಸಂಬಂಧಗಳ ಬಲೆಯಾಗಿದೆ. ಸ್ಲಂ ನಗರಗಳಲ್ಲಿ ಎಲ್ಲ ಸಮುದಾಯದವರು ತಮ್ಮ ವಿಶಿಷ್ಠ ಸಾಮಾಜಿಕ ಜೀವನವನ್ನು ಶತ–ಶತಮಾನಗಳಿಂದ ರೂಢಿಸಿಕೊಂಡಿದ್ದಾರೆ. ಈ ಸಮುದಾಯದವರ ಜೀವನ ಶೈಲಿ, ಸಂಸ್ಕೃತಿ, ಆಂತರಿಕ ಹಾಗೂ ಬಾಹ್ಯ ಒತ್ತಡಗಳಿಂದಾಗಿ ಈ ಸಮುದಾಯದ ಸಾಮಾಜಿಕ ಜೀವನ ವಿಧಾನವು ಕೂಡಾ ಆಗಾಗ ಬದಲಾವಣೆಯಾಗಿವೆ. ಆದರೂ ಹುಟ್ಟು, ಸಾವು, ಮದುವೆಗಳಿಗೆ ಸಂಬಂಧಿಸಿದ ಆಚಾರ ವಿಚಾರಗಳಲ್ಲಿ ಮೂಲಾಂಶಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಲೋಕರೂಢಿಗಳು, ಸಂಪ್ರದಾಯಗಳು, ಪರಸ್ಪರ ಸಹಾಯ, ವಿವಿಧ ನಿಯಮಗಳು, ಉಡುಗೆ–ತೊಡುಗೆ, ಉಳಿಸಿಕೊಂಡು ಬಂದಿದೆ. ವಸತಿ, ಬೆಡಗುಗಳು, ಕುಟುಂಬಗಳು, ನ್ಯಾಯ ಪದ್ಧತಿ ಹಾಗೂ ಸಾಮಾಜಿಕ ನಿಯಂತ್ರಣಗಳನ್ನೊಳ್ಳಗೊಂಡ ಕ್ರಮಬದ್ಧವಾದ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದೆ.

ಅಡಿಟಿಪ್ಪಣಿ

1. ರಾಜಶೇಖರ ಎಸ್. – **ಸಾಮಾಜಿಕ ಸಮಸ್ಯೆಗಳು** – ಬ್ರಹ್ಮ ಪ್ರಕಾಶನ ಶಿವಮೊಗ್ಗ – 2001. ಪು.ಸ. – 64
2. ಒಡೆಯರ್ ಡಿ. ಹೆಗಡೆ – **ಮಹಿಳಾ ಅಧ್ಯಯನಗಳ ಪದಕೋಶ** – ಗುಪ್ತ ಆಪ್ಸೆಟ್ ಮೈಸೂರು – 2007. ಪು.ಸ. 81
3. ಚಂದ್ರಶೇಖರ ಟಿ.ಆರ್. – **ಲಿಂಗಸಂಬಂಧಿಗಳು ಮತ್ತು ಅಭಿವೃದ್ಧಿ** – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ – 2010. ಪು.ಸ. – 40
4. ಚಂದ್ರಶೇಖರ ಟಿ.ಆರ್. – **ಹಕ್ಕು : ಹಂಗು ಅಭಿವೃದ್ಧಿ ಅಧ್ಯಯನಗಳ ಪ್ರಬಂಧಗಳು** – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ – 2011. ಪು.ಸ. – 36
5. ಗಂಗಾಧರ ದೈವಜ್ಞ – **ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ** – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. – 2000. ಪು.ಸ. – 25, 38, 60,
6. Donald Light J.R. – **Slumzation Rellarer Society – Publishing** Alterd A Kopnta Year – 1975.
7. L.N.P. Motherly & Sweaty Motherly – **Slum in India** – A.P.H. Publishing Corporation New Delhi – 2005.
8. Gopal Bhargova – **Urban Problems & Policy Perspectives** – Abhinav Publication New Delhi – 1972.
9. Ronalad W. Smith Fredrick W, Prensto C. – **Sociology an Introduction** – St Martins press New York – 1977.

# ಅಧ್ಯಾಯ – 04

## 4. ಕೊಳೆಗೇರಿಯಲ್ಲಿನ ಸಮುದಾಯಗಳ ಆರ್ಥಿಕ ಹಿನ್ನೆಲೆ ಮತ್ತು ಸ್ಥಿತಿಗತಿಗಳು

**4.1** ಸಮುದಾಯಗಳ ಪಾರಂಪರಿಕ ಕುಲಕಸುಬುಗಳು ಮತ್ತು ಆದಾಯ

**4.2** ವ್ಯಾಪಾರ, ಒಕ್ಕಲುತನ ಮತ್ತು ಕೂಲಿ ಮಾಡುವುದು

**4.3** ವಯೋಗುಂಪುವಾರು ಜನಸಂಖ್ಯೆ ಮತ್ತು ಲಿಂಗಾನುಪಾತ

**4.4** ಮನೆಗಳ ಮಾದರಿಯ ವಿವರ

**4.5** ವಲಸೆ

**4.6** ಮನೆ ಕಟ್ಟುವ ಕೆಲಸಗಾರರು

ಆಧುನೀಕರಣ, ನಗರೀಕರಣ, ಕೈಗಾರೀಕರಣ ಮುಂತಾದ ಪ್ರಭಾವಗಳಿಂದಾಗಿ ಸಮುದಾಯದ ಮೂಲ ವೃತ್ತಿಯಲ್ಲಿ ವ್ಯಾಪಕವಾದ ಬದಲಾವಣೆ ಗೋಚರವಾಗುತ್ತಿದೆ. ಒಂದು ಸಮುದಾಯವು ಅನುಸರಿಸುತ್ತಿರುವ ವೃತ್ತಿ, ಸಂಪತ್ತಿನ ಸದುಪಯೋಗ, ಶಿಕ್ಷಣ, ಸಂಪನ್ಮೂಲದ ಪಾತ್ರ, ಕೌಟುಂಬಿಕ ಜೀವನದ ಆಧಾರದ ಮೇಲೆ ಆ ಸಮುದಾಯದ ಸ್ಥಾನ-ಮಾನಗಳನ್ನು ಅರಿಯಬಹುದಾಗಿದೆ. ಆರ್ಥಿಕ ಚಟುವಟಿಕೆಯ ಆಧಾರದ ಮೇಲೆ ಒಂದು ಸಮುದಾಯದ ರೀತಿ-ನೀತಿಗಳನ್ನು ಗುರುತಿಸಬಹುದಾಗಿದೆ. ಸಮುದಾಯದ ಜೀವನದಲ್ಲಿ ಆರ್ಥಿಕತೆಯು ಪ್ರಬಲವಾಗಿದ್ದರೆ ಅಥವಾ ಉತ್ತಮವಾಗಿದ್ದರೆ. ಆ ಸಮುದಾಯದ ಇತರ ಕ್ಷೇತ್ರಗಳು ಬಲಿಷ್ಠವಾಗಿರುವುದಕ್ಕೆ ಸಹಕಾರಿಯಾಗುತ್ತದೆ.

ಆ ಸಮುದಾಯದ ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳ ಸ್ಥಾನಮಾನಗಳು ನಿರ್ಧರಿತವಾಗುತ್ತವೆ. ಸಮುದಾಯದ ಅಭಿವೃದ್ಧಿಯಲ್ಲಿ ಆರ್ಥಿಕ ವ್ಯವಸ್ಥೆಯು ಅಗ್ರಮಾನ್ಯವಾಗಿದೆ. ಒಂದು ಸಮುದಾಯವು ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಅರ್ಥವ್ಯವಸ್ಥೆಯು ಮಹತ್ವದ ಪಾತ್ರ ವಹಿಸುತ್ತದೆ.

### 4.1 ಅಧ್ಯಯನಕ್ಕಾಗಿ ಆಯ್ದುಕೊಂಡ ಕೊಳಗೇರಿ ಪ್ರದೇಶಗಳ ಜನಸಂಖ್ಯೆ

ಹೊಸಪೇಟೆ ನಗರವನ್ನು ಕೊಳಗೇರಿ ನಗರ ಎಂದು ಕರೆಯಲಾಗಿದೆ. 2001 ರ ಜನಗಣತಿಯ ಪ್ರಕಾರ ಹೊಸಪೇಟೆ ನಗರದಲ್ಲಿ ಒಟ್ಟು 59 ಸ್ಲಂಗಳಿವೆ. ಇಲ್ಲಿನ ಜನಸಂಖ್ಯೆ 1,08,215 ಜನರು ವಾಸವಾಗಿದ್ದಾರೆ. ಈ ಸ್ಲಂಗಳಲ್ಲಿ 21,423 ಕುಟುಂಬಗಳಿವೆ. ಒಟ್ಟು ಸ್ಲಂ ಜನಸಂಖ್ಯೆಯ ಶೇಕಡ 30 ರಷ್ಟು ಜನರು ನೊಂದಾಯಿತ ಸ್ಲಂಗಳಲ್ಲಿ ಬದುಕುತ್ತಿದ್ದಾರೆ. ಗುರುತಿಸಲ್ಪಡದ ಸ್ಲಂಗಳಲ್ಲಿ ಶೇಕಡ 41 ರಷ್ಟು ಜನರು ಬದುಕುತ್ತಿದ್ದಾರೆ ಎಂದು ಹೇಳಬಹುದು.

ಇಲ್ಲಿ ಹೊಸಪೇಟೆಯ ಒಟ್ಟು ಜನಸಂಖ್ಯೆಯ ಶೇ 49.2 ರಷ್ಟು ಜನರು ಸ್ಲಂ ನಿವಾಸಿಗಳು ಪ್ರತಿ ಸ್ಲಂನ ಸರಾಸರಿ ಗಾತ್ರ 369 ಕುಟುಂಬಗಳು ಮತ್ತು ಸರಾಸರಿ ಜನಸಂಖ್ಯೆಯ ಗಾತ್ರ 1834 ಜನರನ್ನು ಕಾಣಬಹುದಾಗಿದೆ.

ಪ್ರಸುತ್ತ ಇಂದು ಹೊಸಪೇಟೆ ನಗರದಲ್ಲಿ 2011 ರ ಜನಗಣತಿಯ ಪ್ರಕಾರ 59 ಸ್ಲಂಗಳಲ್ಲಿ 2,03,467 ಜನರು ವಾಸವಾಗಿದ್ದಾರೆ. ಈ ಸ್ಲಂಗಳಲ್ಲಿ ಒಟ್ಟಾರೆಯಾಗಿ 44,084 ಕುಟುಂಬಗಳಿವೆ. ಒಟ್ಟು ಸ್ಲಂ ಜನ ಸಂಖ್ಯೆಯು ಶೇಕಡ 60 ರಷ್ಟು ಜನರು ನೊಂದಾಯಿತ ಸ್ಲಂಗಳಲ್ಲಿ ಬದುಕುತ್ತಿದ್ದಾರೆ. ಶೇಕಡ 80 ರಷ್ಟು ಜನರು ನೋದಾಯಿತ ಸ್ಲಂಗಳಲ್ಲಿ ವಾಸವಾಗಿದ್ದಾರೆ. ಹಾಗೆಯೇ ಒಟ್ಟು ಸ್ಲಂ ಜನಸಂಖ್ಯೆಯ ಶೇಕಡ 20 ರಷ್ಟು ಜನರು ನೊಂದಣಿ ರಹಿತ ಸ್ಲಂಗಳಲ್ಲಿ ಬದುಕುತ್ತಿದ್ದಾರೆ ಹೇಳಲಾಗಿದೆ.

ಅಧ್ಯಯನಕ್ಕೆ ಆಯ್ದುಕೊಂಡ ಸಂಗಳಲ್ಲಿ ಒಟ್ಟು 4321 ಜನ ವಾಸವಾಗಿದ್ದಾರೆ. ಇದರಲ್ಲಿ ಎಲ್ಲ ಸಮುದಾಯಗಳನ್ನು ಒಳಗೊಂಡಿದೆ. ಒಟ್ಟು ಪುರುಷರ 2159 ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಒಟ್ಟು 2162 ರಷ್ಟು ಮಹಿಳೆಯರನ್ನು ಹೊಂದಿದ ಒಂದು ಸ್ಲಂಗಳು ಆಗಿವೆ. ಇರದಲ್ಲಿ ಒಟ್ಟು ಪುರಷರಿಗಿಂತ ಮಹಿಳೆಯರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿ ಇದೆ. ಎಂದು ಕೆಳಗಿನ ಕೊಷ್ಟಕ ಮೂಲಕ ತಿಳಿಯ ಪಡಿಸಲಾಗಿದೆ.

**ಕೊಷ್ಟಕ**

| Slum Wise Male and Female Population | | | | |
|---|---|---|---|---|
| | **Total** | **Premnagara** | **Shirasinakallu** | **Kariganoor (Valmiki nagara)** |
| **Total** | 4321 | 520 | 2928 | 873 |
| **Male** | 2159 | 267 | 1461 | 431 |
| **Female** | 2162 | 253 | 1467 | 442 |

**ಆಧಾರ :** ಕ್ಷೇತ್ರಕಾರ್ಯದ ಮೂಲಕ ಸ್ಲಂಗಳಿಂದ ಸಂಗ್ರಹಿಸಿದ ಮಾಹಿತಿ.

**Slum Wise Male and Female Population**

Total Premnagara Shirasinakallu Kariganoor (Valmiki nagara)




ಆಧಾರ : ಕ್ಷೇತ್ರಕಾರ್ಯದ ಮೂಲಕ ಸ್ಲಂಗಳಿಂದ ಸಂಗ್ರಹಿಸಿದ ಮಾಹಿತಿ.

ಈ ಮೇಲ್ಕಂಡ ಕೊಷ್ಟಕಕ್ಕೆ ಸಂಬಂಧಿಸಿದಂತೆ ಅಧ್ಯಯನಕ್ಕೆ ಆಯ್ದುಕೊಂಡ ಮೂರು ಸ್ಲಂಗಳಲ್ಲಿ ಒಟ್ಟು ಜನಸಂಖ್ಯೆ 4321 ಅದರಲ್ಲಿ ಪುರುಷರ ಸಂಖ್ಯೆ 2159 ಹಾಗೂ ಮಹಿಳೆಯರ ಸಂಖ್ಯೆ 2162 ಜನ ಇದ್ದರೆ. ಇದರಲ್ಲಿ ಪುರುಷರಿಗಿಂತ ಮಹಿಳೆಯರ ಸಂಖ್ಯೆ ಹೆಚ್ಚಿದೆ ಎಂದು ಹೇಳಲಾಗಿದೆ.

## 4.2 ಸಮುದಾಯಗಳ ಪಾರಂಪರಿಕ ಕುಲಕಸುಬುಗಳು ಮತ್ತು ಆದಾಯ

ಸ್ಥಳೀಯ ಆಡಳಿತವು ಯಾವುದೇ ಜಿಲ್ಲಾ ಕೇಂದ್ರದ ಆಡಳಿತಕ್ಕೆ ಮೀರಿದ ಪ್ರಮಾಣದಲ್ಲಿ ತನ್ನ ಆಯವ್ಯಯವನ್ನು ಹೊಂದಿದೆ. 1998-99 ರಲ್ಲಿವೆ. ಇದರ ವಾರ್ಷಿಕ ಆದಾಯ 304.5 ಲಕ್ಷಗಳು ಅದೇ ವರ್ಷ 318.8 ಲಕ್ಷಗಳನ್ನು ಅಭಿವೃದ್ಧಿ ಕೆಲಸಗಳಿಗೆ ಖರ್ಚು ಮಾಡಿತ್ತು. ಇಷ್ಟಾದರೂ ವ್ಯವಸ್ಥಿತ ನಾಗರೀಕ ಬದುಕನ್ನು ಕಲ್ಪಿಸುವಲ್ಲಿ ಇಲ್ಲಿಯ ನಗರಾಡಳಿತವು ವಿಫಲಗೊಂಡಿದೆ. ಅಭಿವೃದ್ಧಿ ಕಾರ್ಯಗಳಿಗೆ ಸುರಿದ ಹಣ ಯಾವ ದಿಕ್ಕಿಗೆ ಹರಿಯಿತೋ ಅರ್ಥಮಾಡಿಕೊಳ್ಳಬೇಕಿದೆ.

ಇತ್ತೀಚಿಗೆ ನಗರ ಪಟ್ಟಣಗಳ ಶೀಘ್ರ ಅಭಿವೃದ್ಧಿಗಾಗಿ ಬ್ಯಾಂಕ್‌ಗಳಿಂದ ಮತ್ತು ವಿದೇಶಿ ಮೂಲಗಳಿಂದ ಸಾಲವನ್ನು ಪಡೆಯಲಾಗುತ್ತಿದೆ. ಇದರಲ್ಲಿ ಬಡತನ ನಿರ್ಮೂಲನೆ, ಕೊಳಗೇರಿ ಅಭಿವೃದ್ಧಿ ಮುಂತಾದ ಹೆಸರಿನಲ್ಲಿ ಸಾಲಪಡೆದು ಬೇರಾವುದಕ್ಕು ಉಪಯೋಗಿಸುವ ಕೆಲಸ ನಿರಂತರವಾಗಿ ನಡೆದಿದೆ. ಈಗ ಕೊಳಗೇರಿ ಅಭಿವೃದ್ಧಿ ಹೆಸರಿನಲ್ಲಿ ಬರುತ್ತಿರುವುದು ಸಾಲ. ಇದನ್ನು ಚಕ್ರಬಡ್ಡಿ ಸಮೇತ ಸ್ಲಂ ಜನರೇ ಹಿಂದಿರುಗಿಸಬೇಕಿದೆ. ರಾಜ್ಯದ ಕೇವಲ 21 ಪ್ರಥಮ ದರ್ಜೆ ನಗರಗಳ ಅಭಿವೃದ್ಧಿಗೆಂದೇ 753 ಕೋಟಿ ರೂಗಳ ಸಾಲವನ್ನು ಸರ್ಕಾರ ಹುಡ್ಕೋ ಬ್ಯಾಂಕ್‌ನಿಂದ ಮಂಜೂರು ಮಾಡಿಸಿಕೊಂಡಿದೆ.

ಈಗಾಗಲೇ 274 ರೂಗಳು ಕೊಳಗೇರಿ ನಿರ್ಮೂಲನಾ ಮಂಡಲಿಗೆ ಬರುತ್ತಿರುವುದು ಇದೇ ಮೊದಲು ಇನ್ನು ಮುಂದೆ ವಿವಿಧ ನಗರ ಪಟ್ಟಣಗಳ ಕೊಳಗೇರಿ ಅಭಿವೃದ್ಧಿಗೆ ನೂರಾರೂ ಕೋಟಿ ದೇಶೀಯ ಮತ್ತು ವೀದೇಶಿಯ ಸಾಲಗಳು ಮುಂಜೂರಾಗಲಿವೆ.

ಸ್ಲಂಗಳಲ್ಲಿ ಎಲ್ಲ ಜನರು ಒಂದೇ ರೀತಿಯನ್ನು ಅನುಸರಿಸುತ್ತಿಲ್ಲ ಇವರು ನಗರದಿಂದ ನಗರಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗಿ ದುಡಿಯುವ ಒಂದು ಜನಾಂಗವಾಗಿದೆ. ಇವರಲ್ಲಿ ಅನೇಕ ಸಮುದಾಯಗಳು ಇರುವಂತೆ ಅನೇಕ ಕುಲಕಸುಬುಗಳು ಇವೆ. ಅಂದು ಅನ್ಯ ಸಮುದಾಯಗಳು ಇವರನ್ನು ಬಲವಂತವಾಗಿ ಗುಲಾಮರನ್ನಾಗಿ ಮಾಡಿದರು. ಆದರೆ ಇಂದು ಆಧುನಿಕತೆಯು ಸ್ವತಃ ಇವರೇ ಗುಲಾಮರಾಗಿ ಅಥವಾ ಜೀತದಾಳುಗಳಾಗಿ ದುಡಿಯುವಂತೆ ಮಾಡುತ್ತಿದೆ. ಸಮುದಾಯದವರಲ್ಲಿ ಕೂಲಿಯ ಜೊತೆಗೆ ಜೀತ ಪದ್ದತಿಯೂ ಅನುಸರಿಸುತ್ತಿದೆ. ಎಂದರೆ ಅವರ ಆರ್ಥಿಕ ಸ್ಥಿತಿಗತಿ ಯಾವ ರೀತಿಯದೆಂದು ಅರ್ಥೈಸಬಹುದು.

ಸ್ಲಂ ಜನರು ಕೃಷಿ ಕಾರ್ಮಿಕರಾಗಿ ಮಾತ್ರವಲ್ಲದೆ ಬಿಟ್ಟಿ ಕೆಲಸಗಾರರು, ಕಸಗುಡಿಸುವವರು, ಗಾಡಿ ಎಳೆಯುವವರು, ಗ್ಯಾಸ್ ಹೊರುವವರು, ದೀವಟಿಗೆ ಹಿಡಿಯುವವರು, ವ್ಯವಸಾಯಗಾರರು, ದನಗಳ

ಲ್ಲಾಳಿಗಳು, ಕಟ್ಟಿಗೆ ಮಾರುವವರು, ಗೋರಿ ತೋಡುವವರು, ಜೀತಗಾರರಾಗಿಯೂ ದುಡಿಯುತ್ತಿದ್ದಾರೆ. ಲವರು ಕಹಳೆ ಊದುವುದು, ಬ್ಯಾಂಡ್ ನುಡಿಸುವುದು, ಬಡಗಿತನ, ನಾಪಿಕರು, ಆಟೋ ಡ್ರೈವರು, ಾರಿ ಡ್ರೈವರು, ಗೌಂಡಿಗಳು, ಪೆಂಟರ್‌ಗಳು, ಕಾಯಿಪಲ್ಲೆ ಮಾರುವವರು, ಹಾಡುಗಾರರು ಹೀಗೆ ನಾನಾ ಲಾ ಕೌಶಲ್ಯತೆ ಪಡೆದವರಾಗಿದ್ದಾರೆ.



### 4.3 ವ್ಯಾಪಾರ ಮತ್ತು ಒಕ್ಕಲುತನ ಮತ್ತು ಕೂಲಿ ಮಾಡುವುದು

**ವ್ಯಾಪಾರ** : ವ್ಯಾಪಾರದಲ್ಲಿ ಕೆಲವೊಂದು ಸ್ಲಂ ಜನರು ತೊಡಗಿದ್ದಾರೆ. ಗ್ರಾಮೀಣ ಭಾಗದಲ್ಲಿ ಕಿರಾಣಿ ಅಂಗಡಿ, ಬಟ್ಟೆ ಅಂಗಡಿ, ಕಾಳಿನ ವ್ಯಾಪಾರ, ಕಟ್ಟಿಗೆ ವ್ಯಾಪಾರ, ಸೀಮೆ ಎಣ್ಣೆ ವಿತರಣೆ (ವ್ಯಾಪಾರ) ಅಲ್ಲದೆ ಕಾಯಿಪಲ್ಲೆ ಮಾರುವುದು, ಸೀರೆ ಮಾರುವುದು, ಪೆಟ್ರೋಲ್ ಬಂಕ್, ಹಣ್ಣಿನ ಫಾರಂ, ದನದ ದಲ್ಲಾಳಿ, ಕುರಿ ವ್ಯಾಪಾರ, ಹಣ್ಣು ಹಂಪಲಿನ ವ್ಯಾಪಾರ, ಹಾಲು ಮಾರಾಟ, ನಗರ ಪ್ರದೇಶಗಳಲ್ಲಿ ಡೀಲರ್ಸ್ ವ್ಯಾಪಾರ ಮುಂತಾದ ವ್ಯಾಪಾರ ವಹಿವಾಟುಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಹೀಗಾಗಿ ಸಣ್ಣಪುಟ್ಟ ವ್ಯಾಪಾರ ಮಾಡುತ್ತಾರೆ. ಹೊರತಾಗಿ ದೊಡ್ಡ ದೊಡ್ಡ ಅಂಗಡಿಗಳು ಮಾಡಿಕೊಂಡು ವ್ಯಾಪಾರ ಮಾಡಲು ಇಲ್ಲಿಯವರೆಗೆ ಸಾಧ್ಯವಾಗಿಲ್ಲ.



**ಒಕ್ಕಲುತನ** : ಸ್ಲಂ ಗಳಲ್ಲಿ ಇರುವತಂಹ ಜನ ಎಲ್ಲ ಸಮುದಾಯದವರು ಅಲ್ಪಸ್ವಲ್ಪ ಭೂಮಿಯನ್ನು ಹೊಂದಿರುವಂತೆ ಸ್ಲಂ ಜನರು ಸಹ ಹೊಂದಿ ಒಕ್ಕಲುತನವನ್ನು ಮಾಡುತ್ತಿದ್ದಾರೆ. ಪ್ರಾಚೀನ ಪದ್ಧತಿ ಮತ್ತು ಆಧುನಿಕ ತಂತ್ರಗಳನ್ನು ಬಳಸಿ ಒಳ್ಳೆಯ ಬೆಳೆ ಬೆಳೆದು ತಮ್ಮ ಜೀವನ ನಡೆಸುತ್ತಿದ್ದಾರೆ. ಬೇರೆಯವರ ಹೊಲವನ್ನು ಅಡವಿಟ್ಟುಕೊಳ್ಳುವುದು, ಸರಿಪಾಲು ಮಾಡುವುದು, ಹೊಲದ ಉಳುಮೆಗೆ ಪಶುಗಳನ್ನು ರಕ್ಷಿಸಿಕೊಂಡು ಬರುತ್ತಿದ್ದಾರೆ. ನೀರಾವರಿ ಮಾಡಿಕೊಂಡು ವಾಣಿಜ್ಯ ಬೆಳೆ ತೆಗೆಯುವ ಮೂಲಕ ಯಶಸ್ವಿ ವ್ಯವಸಾಯಗಾರರಾಗಿದ್ದಾರೆ. ಹತ್ತಿ, ಶೇಂಗಾ, ಮೆಕ್ಕೆಜೋಳ, ಮೆಣಸಿನಕಾಯಿ, ಉಳ್ಳಾಗಡ್ಡಿ, ತೊಗರಿ, ಸೂರ್ಯಕಾಂತಿ, ಬಿಳಿಜೋಳ, ಕಡಲೆ, ರಾಗಿ, ಇವುಗಳನ್ನಲ್ಲದೆ ಕಾಯಿಪಲ್ಲೆ, ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**ಕೂಲಿ ಮಾಡುವುದು** : “ಇಂತಿಷ್ಟು ಹಣಕ್ಕಾಗಿ ಪ್ರತಿನಿತ್ಯ ಕೆಲಸ ಮಾಡುವುದೇ ಕೂಲಿ” ಎನ್ನಬಹುದು. ಕೂಲಿಗಳಲ್ಲಿ ನಾನಾ ಪ್ರಕಾರಗಳಿವೆ. ನಿತ್ಯ ಹೊಲ ಹಾಗೂ ದನಗಳನ್ನು ಕಾಯುವುದು ಅಥವಾ ರಕ್ಷಣೆ ಮಾಡುವುದಕ್ಕೆ ಇಂತಿಷ್ಟು ಕೂಲಿ ಕೊಡಲಾಗುತ್ತದೆ. ಇದು ಕಾಯುವ ಕೆಲಸವನ್ನು ಮುಖ್ಯವಾಗಿ ಅಧರಿಸಿರುವುದರಿಂದ ಇದನ್ನು ಕಾಯಿ ಕೂಲಿ ಎಂದು ಕರೆಯುತ್ತಾರೆ. ಒಂದು ವಾರದಿಂದ ತಿಂಗಳು, ಮೂರು ತಿಂಗಳು, ಇಲ್ಲವೆ ಆರು ತಿಂಗಳು ಕೆಲಸ ಮಾಡುವುದಕ್ಕೆ ‘ವರಪಿ’ ಎನ್ನುತ್ತಾರೆ. ಕೆಲವೊಂದು ಸಂದರ್ಭಗಳಲ್ಲಿ ನಿರಂತರವಾಗಿ ಕೆಲಸ ಸಿಗುವುದು ಸಾಧ್ಯವಾಗಲಾರದು.

ಏಕೆಂದರೆ ಕೃಷಿ ಕೂಲಿ ಅರೆ ಉದ್ಯೋಗ, ಅಗೋಚರ ಉದ್ಯೋಗವಾಗಿ ಕಂಡು ಬರುತ್ತದೆ. ಕೃಷಿ ಚಟುವಟಿಕೆಗಳು ಆರಂಭವಾಗುವ ಸಂದರ್ಭದಲ್ಲಿ ಕೂಲಿ ಕೆಲಸಗಳು ಪ್ರಾರಂಭ, ಕೆಲಸಕ್ಕೆ ತಕ್ಕಂತೆ ಕೂಲಿ ಸರಿಯಾಗಿ ದೊರೆಯಲಾರದು. ಕೂಲಿ ದೊರೆಯದೇ ಇರುವ ಸಂದರ್ಭದಲ್ಲಿ ಈ ಭಾಗದ ಜನತೆ ಬೇರೆ ಕಡೆಗೆ ಗುಳೆ ಹೋಗುವ ಸಂದರ್ಭಗಳುಂಟು. ಹೆಚ್ಚು ಕೂಲಿ ಸಿಗುವ ಕಡೆ ಹೋದರೆ ಮನೆ, ಮಠ, ಮದುವೆಯಂತಹ ಕಾರ್ಯಕ್ರಮಕ್ಕೆ ಸಹಾಯವಾಗಬಹುದೆಂಬ ಹಿನ್ನೆಲೆಯಲ್ಲಿ ಬೇರೆ ಕಡೆಗೆ ಹೋಗುವರು. ಬಡತನದ ಬೇಗೆಯಿಂದ ಅನೇಕ ಕಾರಣಗಳಿಂದ ಸಾಲ-ಸೂಲ ಮಾಡಿರುವರು. ಅವುಗಳನ್ನು ತಿರಿಸಲು ಅನಿವಾರ್ಯವಾಗಿ ಮಕ್ಕಳನ್ನು ಕಟ್ಟಿಕೊಂಡು ಹೋಗಬೇಕಾಗಿರುತ್ತದೆ. ಹೀಗೆ ಗುಳೆ ಹೋಗುವುದರಿಂದ ಮಕ್ಕಳ ಶಿಕ್ಷಣ ಕುಂಠಿತಗೊಳ್ಳುವುದು.

ಉದ್ಯೋಗ ಖಾತ್ರಿಯಂಥ ಸರ್ಕಾರದ ಯೋಜನೆಗಳು ಇವರಿಗೆ ನಿಲುಕದ ಸ್ಥಿತಿಯಲ್ಲಿವೆ. ಪ್ರತಿಯೊಂದು ಸ್ಲಂ ಗಳಲ್ಲಿ ಪುರುಷರು 150 ರೂ. ಹಾಗೂ ಮಹಿಳೆಗೆ 100 ರೂ ಗಳ. ಕೂಲಿ ದರ ಪಡೆಯುತ್ತಾರೆ. ಋತಕ್ಕನುಗುಣವಾಗಿ ಕೂಲಿ ದರದಲ್ಲಿ ಹೆಚ್ಚು ಕಡಿಮೆ ಆಗುತ್ತದೆ. ಇವರು ಮಾಡುವ ಕೃಷಿ ಕೂಲಿಗಳಾದ ಬದುಕು ನಿರ್ಮಿಸುವುದು. ಹತ್ತಿ ಬಿಡಿಸುವುದು, ಹತ್ತಿ ಕಟ್ಟಿಗೆ ಕೀಳುವುದು, ರಾಸಾಯನಿಕ ಗೊಬ್ಬರ ಹಾಕುವುದು, ಕಟ್ಟಾವು ಮಾಡುವುದು, ಬಿತ್ತನೆ ಮಾಡುವುದುಮ ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಈ ಕೆಲಸ ಮಾಡುವವರ ವಯಸ್ಸು 30 ವರ್ಷದಿಂದ 60 ವರ್ಷ ಒಳಗಿನವರು ಇರುತ್ತಾರೆ.

### 4.4 ವಯೋಗುಂಪುವಾರು ಜನಸಂಖ್ಯೆ ಮತ್ತು ಲಿಂಗಾನುಪಾತ

ಹೊಸಪೇಟೆ ನಗರದಲ್ಲಿ **2011** ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ, ಜನಸಂಖ್ಯೆ ಬೆಳವಣಿಗೆ ದರ, ಜನಸಾಂದ್ರತೆ, ಉಷ್ಣಾಂಶ, ಲಿಂಗಾನುಪಾತ, ವಯೋಮಾನ, ಸಾಕ್ಷರತೆ, ಮುಂತಾದವುಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

1. **ಜನಸಂಖ್ಯೆ**

ನಮ್ಮ ಪ್ರದೇಶದಲ್ಲಿ ಪ್ರತಿ ಹತ್ತು ವರ್ಷಕ್ಕೊಮ್ಮೆ ಜನಗಣತಿಯನ್ನು ಮಾಡುತ್ತಾರೆ. ಈ ಹತ್ತು ವರ್ಷದ ಹಿಂದೆ ಹೊಸಪೇಟೆ ನಗರದಲ್ಲಿ ಅಂದರೆ **2001** ರಲ್ಲಿ ಒಟ್ಟು **1,08,215** ರಷ್ಟು ಜನಸಂಖ್ಯೆಯನ್ನು ಹೊಂದಿದೆ. **2011** ರ ಜನಗಣತಿಯ ಪ್ರಕಾರ ಹೊಸಪೇಟೆ ನಗರದಲ್ಲಿ ಒಟ್ಟು **2,06,167** ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ **1,02,668** ರಷ್ಟು ಪುರುಷರು ಹಾಗೂ **1,03,499** ರಷ್ಟು ಮಹಿಳೆಯರನ್ನು ಒಳಗೊಂಡ ಒಂದು ನಗರವಾಗಿದೆ.

| ಜನಸಂಖ್ಯೆ | |
|---|---|
| ಒಟ್ಟು | 2,06,167 |
| ಪುರುಷರು | 1,02,668 |
| ಮಹಿಳೆಯರು | 1,03,499 |

ಧಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ

## 1. ಜನಸಂಖ್ಯೆ ಬೆಳವಣಿಗೆ ದರ

ಹೊಸಪೇಟೆ ನಗರದಲ್ಲಿ **2001** ರ ಜನಗಣತಿಯು ಪ್ರಕಾರ ಒಟ್ಟು **1,08,215** ರಷ್ಟು ಜನಸಂಖ್ಯೆ ದೆ. **2011** ರ ಜನಗಣತಿಯು ಪ್ರಕಾರ **2,06,167** ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಕಳೆದ ಹತ್ತು ರ್ಷಗಳಲ್ಲಿ ಹೊಸಪೇಟೆ ನಗರದಲ್ಲಿ ಒಟ್ಟು **97,952** ರಷ್ಟು ಜನಸಂಖ್ಯೆ ಹೆಚ್ಚಾಗಿದೆ.

| ಜನಸಂಖ್ಯೆ ಬೆಳವಣಿಗೆ ದರ | | |
|---|---|---|
| 2001 | 1,08,215 | 97,952 |
| 2011 | 2,06,167 | |

ಆಧಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ

## 2. ಜನಸಾಂದ್ರತೆ

ಹೊಸಪೇಟೆ ನಗರ ಸಭೆಯಲ್ಲಿ **2001** ನೇ ಜಗಣತಿಯನ್ನು ನೋಡಿದಾಗ ಹತ್ತು ವರ್ಷಗಳಿಗೆ ಅಂದರೆ **2011** ಹೋತ್ತಿಗೆ ಸುಮಾರು **97,952** ರಷ್ಟು ಜನಸಂಖ್ಯೆ ಹೆಚ್ಚಿದೆ **2001** ರಲ್ಲಿ ಪ್ರತಿ ಚ.ಕಿ.ಮೀ **1834** ರಷ್ಟು ಜನ ವಾಸವಾಗಿದ್ದಾರೆ. **2011** ರ ಹೋತ್ತಿಗೆ ಸುಮಾರು ಪ್ರತಿ ಚ.ಕಿ.ಮೀ. **4148** ರಷ್ಟು ಜನ ವಾಸವಾಗಿದ್ದಾರೆ. **2314** ರಷ್ಟು ಜನಸಂಖ್ಯೆ ಪ್ರತಿ ಚ.ಮೀ. ವಾಸವಾಗಿದ್ದಾರೆ. ಜನಸಂಖ್ಯೆಯನ್ನು ಸ್ಪಷ್ಟವಾಗಿ ಅರಿವಾಗಬೇಕೆಂದರೆ ಜನಸಾಂದ್ರತೆಯ ಅಂಶವನ್ನು ಪರಿಗಣಿಸಬೇಕಾಗುತ್ತದೆ

| ಜನಸಾಂದ್ರತೆ | | |
|---|---|---|
| 2001 | 1834 | 2314 |
| 2011 | 4148 | |

ಆಧಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ

## 3. ಉಷ್ಣಾಂಶ

ಹೊಸಪೇಟೆ ನಗರದಲ್ಲಿ ನೀರಾವರಿ ಹೆಚ್ಚು ಇರುವುದರಿಂದ ಯಾವಾಗಲೂ ಅಷ್ಟೊಂದು ಬಿಸಿಲು ಣಿಸಿಕೊಳ್ಳುವುದಿಲ್ಲ. ಮಳೆಗಾಲಕ್ಕೆ ಸರಿಯಾದ ರೀತಿಯಲ್ಲಿ ಮಳೆಯಾಗುತ್ತದೆ. ಬಿಸಿಲು ಹೆಚ್ಚು ಅಂದರೆ 3 ಡಿಗ್ರಿ ಸೇಲಿಯಸ್ಸ್. ಹಾಗೂ ಕಡಿಮೆ ಅಂದರೆ 25 ಡಿಗ್ರಿ ಸೇಲಿಯಸ್ಸ್ ನಷ್ಟು ಬಿಸಿಲುನ ಇರುತ್ತದೆ. ೊಸಪೇಟೆ ತಂಪಾದ ವಾತಾವರಣದಿಂದ ಕೂಡಿರುತ್ತದೆ. ಮಳೆಗಾಲದಲ್ಲಿ ಮಳೆಯು ಹೆಚ್ಚು ಕಡಿಮೆ ರುತ್ತದೆ. ಅಂದರೆ ಇಲ್ಲಿ ಹತ್ತಿರದಲ್ಲಿ ತುಂಗಭದ್ರ ನದಿಯೂ ಇರುವುದರಿಂದ ವಾತಾವರಣವು ಹೆಚ್ಚು ಂಪಾದ ಪ್ರದೇಶದಿಂದ ಕೂಡಿದೆ. ಅದೇ ರೀತಿ ಈ ಪಟ್ಟಣದಲ್ಲಿ ನೀರಾವರಿಯೂ ಹೆಚ್ಚಿರುವುದರಿಂದ ಾರ್ವಜನಿಕರು ಹೆಚ್ಚಾಗಿ ಕೃಷಿಯನ್ನೇ ಅವಲಂಬಿಸಿದ್ದಾರೆ.

## 4. ಲಿಂಗಾನುಪಾತ

ಒಂದು ದೇಶದಲ್ಲಿರುವ ಒಟ್ಟು ಜನಸಂಖ್ಯೆಯಲ್ಲಿ ಸ್ತ್ರೀಯರು ಮತ್ತು ಪುರುಷರ ನಡುವಿನ ಅನುಪಾತವನ್ನು ಲಿಂಗಾನುಪಾತ ಎನ್ನಲಾಗಿದೆ. ಜನಸಂಖ್ಯಾ ಸಂಯೋಜನೆಯಲ್ಲಿ ಇದೊಂದು ಅತ್ಯಂತ ಮುಖ್ಯವಾದ ಸಂಗತಿಯಾಗಿದೆ. ಹೊಸಪೇಟೆ ನಗರದಲ್ಲಿ 2011 ರ ಜನಗಣತಿಯ ಪ್ರಕಾರ ಲಿಂಗಾನುಪಾತಯೂ 1000 ಪುರುಷರಿಗೆ 1008 ರಷ್ಟು ಮಹಿಳೆಯರು. ಲಿಂಗಾನುಪಾತವನ್ನು ಜಾತಿಗಳ ಆಧಾರ ಮೇಲೆಯೂ ನಿರ್ಧಾರಿಸಲಾಗಿದೆ.

**ಕೋಷ್ಟಕ**

| Sex Ration - Female pre 1000 Male | | | | | | | |
|---|---|---|---|---|---|---|---|
| Sex Ration | General | Schedule Caste | Schedule Tribe | Child | Hindu | Muslim | Christian |
| Male | 1000 | 1000 | 1000 | 1000 | 1000 | 1000 | 1000 |
| Female | 990 | 1037 | 1069 | 968 | 1014 | 991 | 1096 |

ಆಧಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ




ಆಧಾರ : ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ

ಈ ಮೇಲ್ಕಂಡ ಕೋಷ್ಟಕದಲ್ಲಿ 2011 ರ ಜನಗಣತಿಯ ಪ್ರಕಾರ ಒಟ್ಟು ಹೊಸಪೇಟೆ ನಗರದಲ್ಲಿ ಪ್ರತಿ 1000 ಪುರುಷರಿಗೆ 1008 ಮಹಿಳೆಯರು. ಅದನ್ನು ಜಾತಿ ಮೂಲಕ ನೋಡುವುದಾದರೆ. ಸಾಮಾನ್ಯ ಜನಾಂಗದಲ್ಲಿ 1000 ಪುರುಷರಿಗೆ 990 ಮಹಿಳೆಯರು. ಪರಿಶಿಷ್ಟ ಜಾತಿಯಲ್ಲಿ 1000 ಪುರುಷರಿಗೆ 1037 ಜನ ಮಹಿಳೆಯರು, ಪರಿಶಿಷ್ಟ ಪಂಗಡದಲ್ಲಿ 1000 ಪುರುಷರಿಗೆ 1069 ಮಹಿಳೆಯರು, ಮಕ್ಕಳಲ್ಲಿ 1000 ಗಂಡು ಮಕ್ಕಳಿಗೆ 968 ಹೆಣ್ಣು ಮಕ್ಕಳು, ಹಾಗೂ ಹಿಂದೂಗಳಲ್ಲಿ 1000 ಪುರುಷರಿಗೆ 1014 ಮಹಿಳೆಯರು, ಆದರೆ ಮುಸ್ಲಿಂ ರಲ್ಲಿ 1000 ಪುರುಷರಿಗೆ 991 ಮಹಿಳೆಯರು ಮತ್ತು ಕ್ರಿಶ್ಚಿಯನ್‌ನಲ್ಲಿ 1000 ಪುರುಷರಿಗೆ 1096 ರಷ್ಟು ಮಹಿಳೆಯರನ್ನು ಹೊಂದಿದೆ. ಲಿಂಗಾನುಪಾತದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಹಿಳೆಯರು ಇರುವುದು ಈ ಒಂದು ಸಮುದಾಯದಲ್ಲಿಯೇ.

## 5. ವಯೋಮಾನ

ಹೊಸಪೇಟೆ ನಗರ ಸಭೆಯಲ್ಲಿ 2011 ಜನಗಣತಿಯ ಪ್ರಕಾರ ಒಟ್ಟು 2,06,167 ಜನಸಂಖ್ಯೆಯಲ್ಲಿ 15% ರಷ್ಟು 1 ರಿಂದ 6 ವರ್ಷ ವಯೋಮಿತಿಗಿಂತ ಕೆಳಗಿನ ಮಕ್ಕಳು. ಹಾಗೂ 55% ರಷ್ಟು 18 ವರ್ಷಕ್ಕಿಂತ ಮೇಲ್ಪಟ್ಟವರು. ಮತ್ತು 30% ರಷ್ಟು 45 ವರ್ಷಕ್ಕಿಂತ ಮೇಲ್ಪಟ್ಟವರು ಈ ಒಂದು ನಗರದಲ್ಲಿ ವಾಸವಾಗಿದ್ದಾರೆ.

## 6. ಸಾಕ್ಷರತೆ

ಯಾವುದೇ ದೇಶದ ಜನರ ಗುಣಮಟ್ಟ ಅವರ ಸಾಕ್ಷರತೆಯ ಪ್ರಮಾಣವನ್ನು ಅವಲಂಬಿಸಿರುತ್ತದೆ. ಭಾರತದಲ್ಲಿ ಜನರ ಸಾಕ್ಷರತೆಯ ಪ್ರಮಾಣ ಅತ್ಯಂತ ಕನಿಷ್ಠ ಪ್ರಮಾಣದಲ್ಲಿದೆ. ಹೊಸಪೇಟೆ ನಗರದಲ್ಲಿ ಶಿಕ್ಷಣ ಸಂಸ್ಥೆಗಳು ಹೆಚ್ಚು ಇರುವುದರಿಂದ ಅನಕ್ಷರಸ್ಥರಿಗಿಂತ ಅಕ್ಷರಸ್ಥರ ಪ್ರಮಾಣ ಹೆಚ್ಚಿದೆ. ಹೊಸಪೇಟೆ ನಗರದಲ್ಲಿ **2011** ಜನಗಣತಿಯ ಪ್ರಕಾರ ಒಟ್ಟು **79%** ನಷ್ಟು ಅಕ್ಷರಸ್ಥರು ಹಾಗೂ **21%** ನಷ್ಟು ಅನಕ್ಷರಸ್ಥರು ಇದರೆ ಎಂದು ಹೇಳಬಹುದು.

| ಸಾಕ್ಷರತೆ | | |
|---|---|---|
| ಕ್ರ.ಸ. | ಸಾಕ್ಷರತೆ | ಒಟ್ಟು ಶೇ. |
| 1. | ಅಕ್ಷರಸ್ಥರು | 79 % |
| 2. | ಅನಕ್ಷರಸ್ಥರು | 21 % |

**ಆಧಾರ :** ಹೊಸಪೇಟೆ ತಾಲ್ಲೂಕಿನ ನಗರಸಭೆಯಿಂದ ಸಂಗ್ರಹಿಸಿದ ಮಾಹಿತಿ

## 4.5 ಮನೆಗಳ ಮಾದರಿಯ ವಿವರ

ಸ್ಲಂ ಗಳಲ್ಲಿ ಮುಖ್ಯವಾಗಿ ಗುಡಿಸಲು ಮನೆ, ಗುಡಾರ ಮನೆ, ಪಾರಂಪರಿಕ ಮನೆ, ಹೆಂಚಿನ ಮನೆ, ಆಶ್ರಯಾ ಮನೆ, ಮುಂತಾದ ಮನೆಗಳನ್ನು ಈ ಸ್ಲಂ ಗಳಲ್ಲಿ ನೋಡಬಹುದು. ಇಲ್ಲಿ ಸ್ಲಂ ನಿವಾಸಿಗರ ಮನೆಗಳು ವಿಶಿಷ್ಟತೆಯನ್ನು ಹೊಂದಿವೆ. ಪಾರಂಪರಿಕ ಮನೆಗಳ ವಿನ್ಯಾಸದ ಬದಲಾಗಿ ಇಂದು ಗಣನೀಯ ಪ್ರಮಾಣದಲ್ಲಿ ಬದಲಾವಣೆಗಳನ್ನು ಕಾಣಬಹುದು. ಹೆಂಚಿನ ಮನೆಗಳು, ಜನತಾ ಮನೆಗಳು ಕಂಡುಬರುವುದರಿಂದ ಮನೆಗಳ ವಿನ್ಯಾಸದಲ್ಲಿ ಪರಿವರ್ತನೆಯಾಗಿದೆ. ಕೆಲವು ನಗರಗಳ ಸ್ಲಂ ಗಳಲ್ಲಿ ಮನೆಗಳು ಒಂದಕ್ಕೊಂದು ಅಂಟಿಕೊಂಡು ನಿರ್ಮಾಣವಾಗಿವೆ. ಅಂದರೆ ಒಂದು ನಿರ್ದಿಷ್ಟ ಹಲವು ಕುಟುಂಬಗಳು ಒಟ್ಟಾಗಿ ನೆಲೆಯೂರಿ ಜೀವನ ನಿರ್ವಹಿಸುತ್ತಿವೆ. ಇನ್ನು ಕೆಲವು ಕಡೆ ಒಂದೊಂದೇ ಕುಟುಂಬಗಳು ನೆಲೆಸಿವೆ.

**"ಪಾರಂಪರಿಕ ಮನೆ, ಗುಡಿಸಲು ಮನೆ, ಗುಡಾರ, ಡಾಬಾ ಮನೆ, ಆರ್.ಸಿ.ಸಿ. ಮನೆ, ಬಾಡಿಗೆ ಮನೆ, ಹೆಂಚಿನ ಮನೆ, ಆಶ್ರಯ ಅಥವಾ ಜನತಾ ಮನೆ,"** ಹೀಗೆ ಸ್ಲಂಗಳಲ್ಲಿ ವಿವಿಧ ರೀತಿಯ ಮನೆಗಳನ್ನು ಒಳಗೊಂಡ ನಗರಗಳು ಇವೆ. ಹಿಂದಿನ ಮನೆಗಳಿಗೂ ಇಂದಿನ ಮನೆಗಳಿಗೂ ಬಹಳನೇ ಬದಲಾವಣೆಯಾಗಿವೆ ಎಂದು ಹೇಳಬಹುದು. ಇಂದು ಇವರಲ್ಲಿಯೂ ಸಹ ಆಧುನಿಕತೆ ಮತ್ತು ಹೊಸ ವಿನ್ಯಾಸದ ಆಕರ್ಷಣೆಯಿಂದಾಗಿ ಮನೆಯ ಸುತ್ತಮುತ್ತ ಹೂವು, ಹಣ್ಣಿನ ಗಿಡಗಳನ್ನು ಬೆಳೆಸುತ್ತಿದ್ದಾರೆ. ನಾಗರಿಕ ಸಮಾಜದವರು ಬಳಸುವ ವಸ್ತುಗಳನ್ನು ಆದಷ್ಟು ತಮ್ಮ ಮನೆಯಲ್ಲಿ ತಂದಿಟ್ಟುಕೊಳ್ಳುವ ಪ್ರಯತ್ನ

ಾಗಿವೆ. ಇದರ ಫಲವಾಗಿ ಮನೆಯಲ್ಲಿ ರೇಡಿಯೋ, ಟಿ.ವಿ., ಫ್ಯಾನ್, ದೂರವಾಣಿ, ಮೊಬೈಲ್ ಮುಂತಾದವುದಳನ್ನು ಕಾಣಬಹುದಾಗಿದೆ.

## 4.6 ವಲಸೆ

'ವ್ಯಕ್ತಿ ಅಥವಾ ಕುಟುಂಬ' ಕೂಲಿ ಕೆಲಸ ಹುಡುಕಿಕೊಂಡು ಒಂದು ಪ್ರದೇಶ ಬಿಟ್ಟು ಮತ್ತೊಂದು ಪ್ರದೇಶಕ್ಕೆ ಹೋಗುವುದನ್ನು ವಲಸೆ ಎಂದು ಕರೆಯಲಾಗಿದೆ. ಇತ್ತೀಚಿನ ಈ ರೀತಿಯ ವಲಸೆ ಸಂಸ್ಕೃತಿ ಗ್ರಾಮೀಣ ಭಾಗದಲ್ಲಿ ಅಧಿಕವಾಗಿದೆ. ಅತಿವೃಷ್ಠಿ, ಪ್ರಕೃತಿ ವಿಕೋಪ, ಬರಗಾಲ, ಪ್ರವಾಹ, ಭೂಕಂಪ, ಸಂಭವಿಸಿದಾಗ ಜನ ಉದ್ಯೋಗ ಹುಡುಕಿಕೊಂಡು ಗ್ರಾಮ ಬಿಟ್ಟು ಬೇರೆಕಡೆಗೆ ಹೋಗುತ್ತಾರೆ. ಭಾರತದಲ್ಲಿ ಮಳೆಯಾಧಾರಿತ ಕೃಷಿ ಜೀವನ ಮಳೆಯಂತೆಯೇ ಅನಿಶ್ಚತವಾದುದಾಗಿದೆ. ಹಾಗಾಗಿಯೇ ಕೃಷಿಯನ್ನು ಮಳೆಯೊಂದಿಗೆ ನಡೆಸುವ ಜೂಟಾಟ ಎಂದು ಕರೆಯಲಾಗುತ್ತದೆ. ಕೆಲವು ವರ್ಷ ಸಾಕಷ್ಟು ಮಳೆ-ಬೆಳೆಯಾಗಿ ಸಮೃದ್ಧವಾದರೆ ಮತ್ತೆ ಕೆಲವು ವರ್ಷ ಸಕಾಲಕ್ಕೆ ಮಳೆ ಬರದೆ ಬರಗಾಲ ಸಂಭವಿಸುತ್ತದೆ. ಆಗ ಬೇರೆ ಪ್ರದೇಶಗಳಿಗೆ ಹೋಗಿ ಜೀವನ ಸಾಗಿಸುವುದು ಅನಿವಾರ್ಯವಾಗಿರುತ್ತದೆ.

ಕೆಲವು ಗ್ರಾಮದ ಜನ ತಮ್ಮ ಉಪಜೀವನ ನಡೆಸಲು ಗೋವಾ, ಮುಂಬಯಿ, ಪೂನಾ, ಬೆಂಗಳೂರು, ಮುಂತಾದ ದೊಡ್ಡ ಪಟ್ಟಣಗಳ ಕಡೆ ಹೋಗುತ್ತಾರೆ. ಅಲ್ಲಿ ಕೂಲಿಗಳಾಗಿ ಕಲ್ಲು ಒಡೆಯುವುದು, ಕಟ್ಟಡ ಕಟ್ಟುವ ಗೌಂಡಿಯರು, ಕಾರ್ಮಿಕರು ಮುಂತಾದ ಕೆಲಸ ಮಾಡುತ್ತಾರೆ. ಗ್ರಾಮದಲ್ಲಿ ಯಾರಾದರೂ ತಮ್ಮ ಕುಟುಂಬದಲ್ಲಿ ಅಥವಾ ಸಮುದಾಯದಲ್ಲಿ ಸತ್ತರೆ, ಗ್ರಾಮದೇವತೆ ಜಾತ್ರೆಗಳಲ್ಲಿ ದೊಡ್ಡ ಹಬ್ಬವಿದ್ದರೆ ಬಂದು ಹೋಗುತ್ತಾರೆ. ಮತ್ತೆ ತಮ್ಮ ಗ್ರಾಮದಲ್ಲಿ ಸಂಪೂರ್ಣವಾಗಿ ಮಳೆ-ಬೆಳೆ ಬಂದು ಕೆಲಸಗಳು ಹೆಚ್ಚಾಗಿದ್ದರೆ ಸ್ವಂತ ಗ್ರಾಮಕ್ಕೆ ಮರಳುತ್ತಾರೆ.

ಕೆಲವೊಂದು ಸಲ ಭೌಗೋಳಿಕ ಕಾರಣಗಳಿಂದ ವಲಸೆ ಹೋಗಲಾಗುತ್ತದೆ. ಕೆಲವು ಕುಟುಂಬಗಳು ಸುಗ್ಗಿ ಕಾಲದಲ್ಲಿಯೇ ವಲಸೆ ಹೋಗುತ್ತಾರೆ. ಇದರಲ್ಲಿ ಕುಟುಂಬದ ಎಲ್ಲ ಸದಸ್ಯರು ವಲಸೆ ಹೋಗದೆ, ಒಂದಿಬ್ಬರು ಮಾತ್ರ ಗ್ರಾಮದಿಂದ ಗ್ರಾಮಕ್ಕೆ ಸುಗ್ಗಿಗಾಗಿ ವಲಸೆ ಹೋಗುತ್ತಾರೆ. ಹೀಗೆ ವಲಸೆ ಬದತಂಹ ಜನರಿಂದ ಸ್ಲಂ ಗಳು ನಿರ್ಮಾಣವಾಗುತ್ತವೆ.

## 4.7 ಮನೆ ಕಟ್ಟುವ ಕೆಲಸಗಾರರು

ಮನುಷ್ಯ ಹಗಲಿರುಳು ದುಡಿದು ಬೆಂಡಾದ ದೇಹಕ್ಕೆ ಶಾಂತಿ ತಾಣವಾಗಿ ಮನೆ ಕಟ್ಟಿಕೊಂಡು ವಾಸಿಸುವುದು ಸರ್ವಸಾಮಾನ್ಯ. ಎಲ್ಲಾ ಋತುಮಾನಗಳಿಗೆ ರಕ್ಷಣೆ ನೀಡುವ ಮನೆ ಕಟ್ಟಿಕೊಂಡಿರುವುದು ಕೂಡ ಸಾಮಾನ್ಯವಾಗಿದೆ. ಮನುಷ್ಯ ತನ್ನ ಜೀವನದ ಆಯುಷ್ಯದ ಅವಧಿಯಲ್ಲಿ ಹೆಚ್ಚಿನ ಸಮಯ ಮನೆಯಲ್ಲಿ ಕಳೆಯುತ್ತಾನೆ. ಆದರೂ ಸ್ಲಂ ನಿವಾಸಿಗರು ತಮ್ಮ ಮನೆಯನ್ನು ಸರಿಮಾಡಿಕೊಳ್ಳಲಾಗದಿದ್ದರೂ ಬೇರೆಯವರ ಮನೆ ಚನ್ನಾಗಿ ಕಟ್ಟಿಕೊಡುವ ಕಲೆ ಕರಗತ ಮಾಡಿಕೊಂಡಿದ್ದಾರೆ.

ಕೃಷಿ ಚಟುವಟಿಕೆಗಳು ಆರಂಭವಾಗುವ ಸಂದರ್ಭದಲ್ಲಿ ಕೂಲಿ ಕೆಲಸಗಳು ಪ್ರಾರಂಭ, ಕೆಲಸಕ್ಕೆ ಕ್ಕಂತೆ ಕೂಲಿ ಸರಿಯಾಗಿ ದೊರೆಯಲಾರದು. ಕೂಲಿ ದೊರೆಯದೇ ಇರುವ ಸಂದರ್ಭದಲ್ಲಿ ಈ ಭಾಗದ ನತೆ ಬೇರೆ ಕಡೆಗೆ ಗುಳೆ ಹೋಗುವ ಸಂದರ್ಭಗಳುಂಟು. ಹೆಚ್ಚು ಕೂಲಿ ಸಿಗುವ ಕಡೆ ಹೋದರೆ ಮನೆ, ಉತ, ಮದುವೆಯಂತಹ ಕಾರ್ಯಕ್ರಮಕ್ಕೆ ಸಹಾಯವಾಗಬಹುದೆಂಬ ಹಿನ್ನೆಲೆಯಲ್ಲಿ ಬೇರೆ ಕಡೆಗೆ ಹೋಗುವರು. ಬಡತನದ ಬೇಗೆಯಿಂದ ಅನೇಕ ಕಾರಣಗಳಿಂದ ಸಾಲ-ಸೂಲ ಮಾಡಿರುವರು.

ಗಾರೆ ತೋಡುವ, ಆಸ್ತಿಭಾರ ಹಾಕುವ, ನೀಲಿ ನಕ್ಷೆ ಹಾಕುವ, ಗೌಂಡಿಯಾಗಿ ಮತ್ತು ಮೇಸ್ತ್ರಿಯಾಗಿ ಕೆಲಸ ಮಾಡುವ ಮೂಲಕ ನಗರಗಳಲ್ಲಿಯೇ ಅಲ್ಲದೆ ನಗರ ಪ್ರದೇಶಗಳಲ್ಲಿಯೂ ಹೆಚ್ಚಿನ ಕೂಲಿ ಕೊಡುವ ಕಟ್ಟಡದ ಕೆಲಸದಲ್ಲಿ ತೊಡಗಿದ್ದಾರೆ. ಇಂದು ದೊಡ್ಡ ದೊಡ್ಡ ನಗರಳಿಗೆ ವಲಸೆ ಹೋಗಿ ಗೌಂಡಿಗಳಾಗಿ, ಮೇಸ್ತ್ರಿಗಳಾಗಿ, ಬಾರ್‌ಬಿಲ್ಡರ್‌ಗಳಾಗಿ, ಪ್ಲಂಬರ್‌ಗಳಾಗಿ, ನಳಗಳ ಜೋಡನೆ, ಎಲೆಕ್ಟ್ರೀಶಿಯನ್ ಆಗಿ, ಇನ್ನಿತರೆ ಕೆಲಸಗಳಲ್ಲಿ ಕಾರ್ಯ ಪ್ರವೃತ್ತರಾಗಿದ್ದಾರೆ. ಕೃಷಿ ಕೂಲಿ ಮಾಡಿ ಜೀವಿಸುವದಕ್ಕಿಂತಲೂ ಮನೆ ಕಟ್ಟುವ ಕೆಲಸಗಾರರಾಗಿ ದುಡಿಯುತ್ತಿದ್ದಾರೆ ಇಂತ ಕೆಲಸಗಾರರ ಕುಟುಂಬಗಳು ಆರ್ಥಿಕ ಪ್ರಗತಿಯನ್ನು ಸಾಧಿಸಿವೆ.

**ಸಮಾರೋಪ**

ನಾಲ್ಕನೇಯ ಅಧ್ಯಯನದಲ್ಲಿ ಸಮುದಾಯಗಳ ಪಾರಂಪರಿಕ ಕುಲಕಸುಬುಗಳು ಮತ್ತು ಆದಾಯ, ವ್ಯಾಪಾರ ಮತ್ತು ಒಕ್ಕಲುತನ, ವಯೋಗುಂಪುವಾರು ಜನಸಂಖ್ಯೆ ವಿವರ, ಲಿಂಗಾನುಪಾತ, ಮನೆಗಳ ಮಾದರಿಯ ವಿವರ, ವಲಸೆ, ಮನೆ ಕಟ್ಟುವ ಕೆಲಸಗಾರರು ಯಾವ ರೀತಿ ಜೀವನ ನಡೆಸುತ್ತಿದ್ದಾರೆ ಎಂಬುದರ ಬಗ್ಗೆ ಅಧ್ಯಯನ ಮಾಡಲಾಗಿದೆ.

ಕೊಳಗೇರಿಗಳ ಸಮುದಾಯಗಳಲ್ಲಿ ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳ ಸ್ಥಾನಮಾನಗಳು ನಿರ್ಧರಿತವಾಗುತ್ತವೆ. ಸಮುದಾಯದ ಅಭಿವೃದ್ಧಿಯಲ್ಲಿ ಆರ್ಥಿಕ ವ್ಯವಸ್ಯೆಯು ಅಗ್ರಮಾನ್ಯವಾಗಿದೆ. ಒಂದು ಸಮುದಾಯವು ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಅರ್ಥವ್ಯವಸ್ಥೆಯು ಮಹತ್ವದ ಪಾತ್ರ ವಹಿಸುತ್ತದೆ. ಸ್ಲಂಗಳಲ್ಲಿ ಎಲ್ಲ ಜನರು ಒಂದೇ ರೀತಿಯನ್ನು ಅನುಸರಿಸುತ್ತಿಲ್ಲ ಇವರು ನಗರದಿಂದ ನಗರಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗಿ ದುಡಿಯುವ ಒಂದು ಜನಾಂಗವಾಗಿದೆ. ಇವರಲ್ಲಿ ಅನೇಕ ಸಮುದಾಯಗಳು ಇರುವಂತೆ ಅನೇಕ ಕುಲಕಸುಬುಗಳು ಇವೆ. ಅಂದು ಅನ್ಯ ಸಮುದಾಯಗಳು ಇವರನ್ನು ಬಲವಂತವಾಗಿ ಗುಲಾಮರನ್ನಾಗಿ ಮಾಡಿದರು. ಆದರೆ ಇಂದು ಆಧುನಿಕತೆಯು ಸ್ವತಃ ಇವರೇ ಗುಲಾಮರಾಗಿ ಅಥವಾ ಜೀತದಾಳುಗಳಾಗಿ ದುಡಿಯುವಂತೆ ಮಾಡುತ್ತಿದೆ. ಸಮುದಾಯದವರಲ್ಲಿ ಕೂಲಿಯ ಜೊತೆಗೆ ಜೀತ

ದ್ಧತಿಯೂ ಅನುಸರಿಸುತ್ತಿದೆ. ಎಂದರೆ ಅವರ ಆರ್ಥಿಕ ಸ್ಥಿತಿಗತಿ ಯಾವ ರೀತಿಯದೆಂದು ರ್ಧೈಸಬಹುದು.

ಆಧುನೀಕರಣ, ನಗರೀಕರಣ, ಕೈಗಾರೀಕರಣ ಮುಂತಾದ ಪ್ರಭಾವಗಳಿಂದಾಗಿ ಮುದಾಯದ ಮೂಲ ವೃತ್ತಿಯಲ್ಲಿ ವ್ಯಾಪಕವಾದ ಬದಲಾವಣೆ ಗೋಚರವಾಗುತ್ತಿದೆ. ಒಂದು ಮುದಾಯವು ಅನುಸರಿಸುತ್ತಿರುವ ವೃತ್ತಿ, ಸಂಪತ್ತಿನ ಸದುಪಯೋಗ, ಶಿಕ್ಷಣ, ಸಂಪನ್ಮೂಲದ ಪಾತ್ರ, ಟುಂಬಿಕ ಜೀವನದ ಆಧಾರದ ಮೇಲೆ ಆ ಸಮುದಾಯದ ಸ್ಥಾನ-ಮಾನಗಳನ್ನು ಅರಿಯಬಹುದಾಗಿದೆ. ಆರ್ಥಿಕ ಚಟುವಟಿಕೆಯ ಆಧಾರದ ಮೇಲೆ ಒಂದು ಸಮುದಾಯದ ರೀತಿ-ನೀತಿಗಳನ್ನು ಗುರುತಿಸಬಹುದಾಗಿದೆ. ಸಮುದಾಯದ ಜೀವನದಲ್ಲಿ ಆರ್ಥಿಕತೆಯು ಪ್ರಬಲವಾಗಿದ್ದರೆ ಅಥವಾ ಉತ್ತಮವಾಗಿದ್ದರೆ. ಆ ಸಮುದಾಯದ ಇತರ ಕ್ಷೇತ್ರಗಳು ಬಲಿಷ್ಠವಾಗಿರುವುದಕ್ಕೆ ಸಹಕಾರಿಯಾಗುತ್ತದೆ.

## ಆಡಿ ಟಿಪ್ಪಣಿ

1. ಒಡೆಯರ್ ಡಿ. ಹೆಗಡೆ, ಅನ್ನಪೂರ್ಣೇಶ್ವರಿ(ಸಂ). – **ಆರ್ಥಿಕ ನೆಲೆಗಳು ಮತ್ತು ಆಯಾಮಗಳು** – ಮಾನವ ಅಭಿವೃದ್ಧಿಗಳ ಕೇಂದ್ರ ಮೈಸೂರು – 2003. ಪು.ಸ. – 52
2. ರಾಜಶೇಖರ ಎಸ್. – **ಭಾರತೀಯ ಸಮಾಜಶಾಸ್ತ್ರ** – ಬ್ರಹ್ಮ ಪ್ರಕಾಶನ ಶಿವಮೊಗ್ಗ – 2001. ಪು.ಸ. – 77
3. ರಾಜಶೇಖರ ಎಸ್. – **ಸಾಮಾಜಿಕ ಸಮಸ್ಯೆಗಳು** – ಬ್ರಹ್ಮ ಪ್ರಕಾಶನ ಶಿವಮೊಗ್ಗ – 2001. ಪು.ಸ. – 80
4. ಶ್ರೀಮತಿ ಎಚ್.ಎಸ್. – **ಮಹಿಳಾ ಆರ್ಥಿಕತೆ** – ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವವಿದ್ಯಾಲಯ ಹಂಪಿ – 2007. ಪು.ಸ. – 60
5. ಸಾವಿತ್ರಿ ಕೆ. – **ಕೊಳಚೆ ಪ್ರದೇಶದಲ್ಲಿ ಮಹಿಳೆಯರು** – ಕನ್ನಡ ಸಾಹಿತ್ಯ ಪರಷತ್ತು ಬೆಂಗಳೂರು – 2002. ಪು.ಸ. – 25
6. ರಾಜೇಂದ್ರ ವೈ.ಜೆ. ಮಂಜುನಾಥ ಎಂ. – **ಹೊಸಪೇಟೆಯ ಹಳೆ ಸ್ಥಳಗಳು** – ಜನ ಸಹಯೋಗ ಪ್ರಕಾಶಕರು – ಅಕ್ಷರ ವಿನ್ಯಾಸ ಎಸ್.ಆರ್. ನಗರ ಬೆಂಗಳೂರು – 2001. ಪು.ಸ. – 10

